# ಓದಲೇ ಬೇಕಾದ ಐತಿಹಾಸಿಕ ಪುಸ್ತಕಗಳು.





| | | | |
|---|---|---|---|
| ಲ್ಲಾ… | | | ೩ ಆ |
| ಪಮ… | | | ೬ ಆ |
| ಅಮಾ… | | | ೧-೪-೦ |
| ಅಮಾ… | | | ೩ ಆ |
| ಆತ್ಮಬ… | | | ೧ ರೂ |
| ಈಶಸ… | | | ೧-೪-೦ |
| ಊರ್ಮಿ… | | | ೧-೮-೦ |
| ಎಚ್ಚ… | | | ೮ ಆ |
| ಕಂಕಣ… | | | ೩ ಆ |
| ಗಜಪ… | | | ೧ ರೂ |
| ಗೆಲುವಿ… | | | ೨ ಆ |
| ಚಾಲು… | | | ೬ ಆ |
| ತೋ… | | …ರಿ | ೧ ರೂ. |
| ಚಮು… | | | ೧-೪-೦ |
| ಜಕಣ… | | | ೧೪ ಆ |
| ಪ್ರ. … | | | ೧೦ ಆ |
| ತಾಯಿ… | | …ಲತೆ | ೩ ಆ |
| ದ್ರೈವ… | | | ೧೨ ಆ |
| ಪಳವ… | | | ೧ ರೂ |
| ನರವಿ… | | | ೧೪ ಆ |
| ನೇತಾ… | | | ೧೨ ಆ |
| ಪತಿತ… | | | ೨-೮-೦ |
| | | | ೧೨ ಆ |
| | | | ೧೨ ಆ |
| ಪ್ರಾರಬ್ಧ ಪ್ರಹಾರ | ೬ ಆ | ಸ್ವರಾಜ್ಯ ಸೋಪಾನ | ೧-೮-೦ |
| ಪರಾವರ್ತನ | ೮ ಆ | ಹಂಸಾ | ೧-೪-೦ |
| ಪ್ರಾಣದಾನ | ೩ ಆ | ಹಿಂದೂ ಮುಸಲ್ಮಾನರ ಐಕ್ಯ | ೩ ಆ |

---

**ಈಗ ತಾನೆ ಹೊರಟ ಹೊಸದೊಂದು ಪತ್ತೆದಾರಿ ಪುಸ್ತಕ!**

# ಹಗೆ

ಬರೆದವರು: ಭಟ್ಟ ಸದಾಶಿವ ಶರ್ಮಾ. ಗುಂಡ್ಮಿ
ಪುಟ ೧೦೦ ಬೆಲೆ ೧೨ ಆಣೆ ಅಂಚೇ ವೆಚ್ಚ ಬೇರೆ
ಈಗಲೆ ತರಿಸಿ ಓದಿರಿ

ವಿಳಾಸ—**ಭಿ. ಪ. ಕಾಳೆ, ಮದಿಹಾಳ, ಧಾರವಾಡ**

* ಶ್ರೀ ಶೇಷಾಚಲ ಗ್ರಂಥಮಾಲೆ, ಧಾರವಾಡ *

# ಸೂರ್ಯಾಸ್ತ.

( ಐತಿಹಾಸಿಕ ಕಾದಂಬರಿ )

ಲೇಖಕ:—

ನಾಗೇಶ.



ಮುದ್ರಕ ಮತ್ತು ಪ್ರಕಾಶಕ:—

**ಭಿ. ಪ. ಕಾಳೆ,**

ಶ್ರೀ ಶೇಷಾಚಲ ಪ್ರೆಸ್, ಮುನಿಹಾಳ ಧಾರವಾಡ.





೧೯೪೩

೨ ನೇ ಮುದ್ರಣ

೧೨ ಆಣೆ.



# ಮುನ್ನುಡಿ.

---

ದೇಶದ ಅಭ್ಯುದಯ-ಸ್ವಾತಂತ್ರ್ಯಗಳಿಗೆ ಸಂಘಟಿತ ಶಕ್ತಿಯು ಬಲವಾದ ಸಾಧನವಾಗಿರುವದು. ಜನಾಂಗದಲ್ಲಿ ಈ ಶಕ್ತಿಯಿಲ್ಲದಿದ್ದರೆ ಅದು ಅವನತಿ ಹೊಂದುವದು. ಸ್ವಾರ್ಥಕ್ಕೊಳಗಾಗಿಯಾಗಲಿ ದ್ವೇಷಾಸೂಯೆಗಳಿಂದಾಗಲಿ ಜನಾಂಗದ ಸಂಘಶಕ್ತಿಯು ನಾಶವಾಯಿತೆಂದರೆ, ಅದು ದುರವಸ್ಥೆಗೊಳಗಾಗುವದೆಂಬದಕ್ಕೆ ಈ ಕಥೆಯು ಮನೋವೇಧಕ ದೃಷ್ಟಾಂತವಾಗಿರುವದು. ಚಹ್ವಾಣ ಕುಲಕೇಸರಿಯಾದ ಪೃಥ್ವೀರಾಜನು ದೇಶದಲ್ಲಿ ಐಕ್ಯವು ಪ್ರಸ್ಥಾಪಿತವಾಗಬೇಕೆಂದು ಶಕ್ತಿಮೀರಿ ಸಾಹಸ ಮಾಡಿದರೂ, ಸ್ವಾರ್ಥಿಯೂ ಅಸೂಯಾಪರನೂ ಆದ ಜಯಚಂದ್ರನ ರಾಷ್ಟ್ರದ್ರೋಹಕ್ಕಾಗಿ ಅವನ ಇಚ್ಛೆಯು ಸಫಲವಾಗಲಿಲ್ಲ. ಕಡೆಗೆ ಈ ಕ್ಷಾತ್ರತೇಜೋನಿಧಿಯಾದ ಚಹ್ವಾಣ ಸೂರ್ಯನು ಹೇಗೆ ಅಸ್ತಂಗತನಾದನೆಂಬದನ್ನು ಈ ಪುಸ್ತಕದಲ್ಲಿ ಯಥಾಮತಿಯಾಗಿ ಚಿತ್ರಿಸಿರುವೆನು. ಈ ಕಥೆಯನ್ನು ಬರೆಯುವದಕ್ಕೆ ಶ್ರೀಯುತ ಸರದೇಸಾಯಿಯವರ ಹಿಂದುಸ್ತಾನದ ಅರ್ವಾಚೀನ ಇತಿಹಾಸವೂ, ಚಹ್ವಾಣೀ ಸಮಶೇರ ಎಂಬ ಕಥೆಯೂ, ಸುಬೋಧ ಕುಸುಮಾಂಜಲಿಯೊಳಗಿನ ಸತೀ ಸಂಯುಕ್ತೆ ಎಂಬ ಕಥೆಯೂ ಆಶ್ರಯವಾದ್ದರಿಂದ, ಆ ಗ್ರಂಥಕರ್ತರಿಗೆ ತುಂಬಾ ಉಪಕೃತನಾಗಿರುವೆನು.

ಶ್ರೀ ಶೇಷಾಚಲ ಗ್ರಂಥಮಾಲೆಯ ಸಂಪಾದಕರಾದ ಶ್ರೀಯುತ ಭಿ. ಪ. ಕಾಳೆ ಇವರು ನನ್ನ ಲೇಖಗಳನ್ನು ಅತ್ಯಂತ ಆದರದಿಂದ ಸ್ವೀಕರಿಸಿ, ನನ್ನ ಲೇಖನ ಕಲೆಯನ್ನು ಬೆಳವಣಿಗೆ ಮಾಡತೊಡಗಿದ್ದರಿಂದ ಆ ಮಹಾಶಯರಿಗೆ ನಾನು ಅತ್ಯಂತ ಋಣಿಯಾಗಿರುವೆನು.



ಬನ್ನಿಕೊಪ್ಪ
ತಾ|| ೨೧—೧೨—೩೨

ಕನ್ನಡಿಗರ ವಿಧೇಯ,
**ನಾಗೇಶ**

---

ಮೊದಲನೇ ಮುದ್ರಣದ ಪ್ರತಿಗಳು ತೀರಿದರೂ ವಾಚಕರ ಹೆಚ್ಚಿನ ಬೇಡಿಕೆ ಪೂರೈಸಲಿಕ್ಕೆಂದು ಈ ೨ನೇ ಮುದ್ರಣವನ್ನು ಈಗಿನ ಅತ್ಯಂತ ಕಾಗದದ ಮಹರ್ಘತೆಯಲ್ಲೂ ತೆಗೆಯಬೇಕಾಯಿತು.

—ಪ್ರಕಾಶಕ

# ಸೂರ್ಯಾಸ್ತ.



ಪ್ರಭಾತ ಸಮಯ. ಭಗವಾನ್ ಅಂಶುಮಾಲಿಯು ಉದಯಾಚಲವನ್ನೇರಿದ್ದಿಲ್ಲ. ಪ್ರಾಗಂಗನೆಯ ಮುಖವು ತಾಮ್ರಪ್ರಭೆಯಿಂದ ಶೋಭಾಯಮಾನವಾಗಿತ್ತು. ಮಾರುತನ ಮಂದವಾದ ಶೀತಲ ಲಹರಿಯಿಂದ ಮನಸ್ಸು ಆಹ್ಲಾದಗೊಳ್ಳತೊಡಗಿತ್ತು. ದಿವಾ ಮಹತ್ವಾಕಾಂಕ್ಷೆ ಕರನ ಉದಯೋತ್ಸವವನ್ನು ವ್ಯಕ್ತಪಡಿಸುವದಕ್ಕಾಗಿ ಪಕ್ಷಿ ಗಣಗಳ ಕಲಕಲಾಟವು ಪ್ರಾರಂಭವಾಗಿತ್ತು. ಅರುಣಕಾಂತಿಯಿಂದ ಆರಕ್ತವಾದ ಸಿಂಧುನದವು ಪಶ್ಚಿಮ ವಾರಿನಿಧಿಯನ್ನು ಕೂಡುವದಕ್ಕಾಗಿ ಒಳ್ಳೆಯ ರಭಸದಿಂದ ಸಾಗಿದ್ದರಿಂದ, ಆ ನದ ತಟಾಕದ ಆಸಮಂತಾತ್ ಪ್ರದೇಶವು ಖಳ-ಖಳ ಶಬ್ದದಿಂದ ನಿನಾದಗೊಂಡಿತ್ತು. ಆ ತಟಾಕದ ಬಳಿಯಲ್ಲಿದ್ದ ವನರಾಜಿಯೂ ತೃಣಾಚ್ಛಾದಿತವಾದ ಭೂಪ್ರದೇಶವೂ ಹರಿತ್ ವರ್ಣದಿಂದ ಶೋಭಾಯಮಾನವಾಗಿ ಕಾಣತೊಡಗಿತ್ತು. ಪ್ರಭಾತಕಾಲದ ಸೃಷ್ಟಿ ಸುಂದರಿಯ ನೈಸರ್ಗಿಕ ಶೋಭೆಯನ್ನು ಹೊಗಳುವದೋ ಏನೋ ಎಂಬಂತೆ ಶಹಾಬುದ್ದೀನ ಘೋರಿಯ ಸೈನ್ಯದೊಳಗಿನ ಭೇರಿಯು 'ಧುಡುಂ ಧುಡುಂ ಧುಡುಂ ಧುಡುಂ' ಎಂದು ಧ್ವನಿಗೈಯತೊಡಗಿತ್ತು.

ಶಹಾಬುದ್ದೀನ ಘೋರಿಯು ತನ್ನ ಅಜಿಂಕ್ಯವಾದ ಸೇನೆಯೊಂದಿಗೆ ಸಿಂಧು ತಟಾಕದಲ್ಲಿ ಬೀಡು ಬಿಟ್ಟಿದ್ದನು. ಯವನಶಕ್ತಿಯ ಪರಾಕಾಷ್ಠೆಯನ್ನು ತೋರಿಸಿ ಉತ್ತರದ ರಜಪೂತ ರಾಜರನ್ನು ಹಣಿಯಬೇಕೆಂದು ಅವನು ತನ್ನ ಅಪ್ರತಿಮ ಯೋಧರಾದ ನಿಸುರತಖಾನ, ತಾತಾರಖಾನ ಮೊದಲಾದ ಸೇನಾನಾಯಕರನ್ನು ಜೊತೆಗೆ ಕರೆತಂದಿದ್ದನು. ಫಲದ್ರೂಪವಾದ ಭಾರತವರ್ಷವು ತನ್ನ ಸ್ವಾಧೀನದಲ್ಲಿರಬೇಕೆಂದೂ ಹಿಂದಭೂಮಿಯಲ್ಲಿ ಇಸ್ಲಾಮಿ ಧರ್ಮವು ಪ್ರಸಾರವಾಗಬೇಕೆಂದೂ ಶಹಾಬುದ್ದೀನನ ಮಹತ್ವಾಕಾಂಕ್ಷೆಯಿತ್ತು. ಅವನ ಈ ಆಕಾಂಕ್ಷೆಯು ಈಡೇರಲಿಕ್ಕೆ ಇನ್ನೂ ಅವಕಾಶವಿತ್ತು. ಆಗ ಉತ್ತರದ ರಜಪೂತ ಅರಸರ ಪರಾಕ್ರಮ ಪ್ರಭೆಯು ಇನ್ನೂ ಅವನ ಎದೆಯನ್ನು ನಡುಗಿಸುತ್ತಿತ್ತು. ಭಾರತದ ಸ್ವಾತಂತ್ರ್ಯ ರವಿಯು

ಅವನ ಕಣ್ಣುಗಳನ್ನು ಕುಕ್ಕಿಸುತ್ತಲಿದ್ದರೂ, ಅವನು ಧೃತಿಗುಂದದೆ ದೀರ್ಘಸಾಹಸಕ್ಕಾದಿ ಸಜ್ಜಾಗಿದ್ದನು. ಮಹತ್ವಾಕಾಂಕ್ಷಿಗಳಿಗೆ ಯಾವ ಪರಿವೆಯೂ ಇರುವದಿಲ್ಲ. ಶಹಾಬುದ್ದೀನನು ಭಾರತವರ್ಷವನ್ನು ಪಾದಾಕ್ರಾಂತ ಮಾಡಿ, ಅಲ್ಲಿ ಮಹಮ್ಮದೀಯ ಧರ್ಮವನ್ನು ಪ್ರಸಾರಗೊಳಿಸಬೇಕಾಗಿತ್ತು; ಭಾರತದ ಸಂಪತ್ತಿನಿಂದ ಯವನ ಭೂಮಿಯನ್ನು ಸುವರ್ಣಮಯಮಾಡಬೇಕಾಗಿತ್ತು.

ಶಹಾಬುದ್ದೀನ ಘೋರಿಯು ಹಿಂದುಸ್ತಾನದಲ್ಲಿ ಕಾಲಿಟ್ಟಾಗ ದಿಲ್ಲಿಯಲ್ಲಿ ತವಾತ ವಂಶದ ಅನಂಗಪಾಲನೂ, ಅಜಮೀರದಲ್ಲಿ ಚವ್ಹಾಣಕುಲದ ಸೋಮೇಶ್ವರನ ಪುತ್ರನಾದ ಪೃಥ್ವೀರಾಜನೂ, ಕನೋಜದಲ್ಲಿ ರಾಠೋಡ ಕುಲದ ವಿಜಯಭೂಪಾಲನ ಮಗನಾದ ಜಯಚಂದ್ರನೂ, ಗುಜರಾಥದಲ್ಲಿ ಚಾಲುಕ್ಯರ ಭೋಳಾ ಭೀಮದೇವನೂ, ಮೇವಾಡದಲ್ಲಿ ಘೇಲೋಟವಂಶದ ಸಮರಸಿಂಹ ರಾವಳನೂ, ಜಸಲಮೀರದಲ್ಲಿ ಭೋಜದೇವನೂ, ಅಬೂಗಡದಲ್ಲಿ ಸಲಪರಾಮ ಪವಾರನೂ, ಬಟಿಂಡಾಗಡದಲ್ಲಿ ಅಮರಸಿಂಹ ಪರಮಾರನೂ ರಾಜ್ಯವಾಳುತ್ತಿದ್ದರು. ಈ ಕ್ಷಾತ್ರಮಹೇಶರು ಅತ್ಯಂತ ಸಮರ್ಥರು; ಅಜಿಂಕ್ಯರು; ಸಂಗ್ರಾಮಶಾರ್ದೂಲರು. ಇಂತಹ ಸತ್ವಶಾಲಿಗಳ ರಾಜ್ಯದಲ್ಲಿ ಕಾಲಿಡಬೇಕಾದರೆ ಶಹಾಬುದ್ದೀನನು ಒಳ್ಳೆಯ ಎದೆಗಾರನಿರಬಹುದಲ್ಲವೆ? ಹೌದು; ಘೋರಿಯು ಕೆಚ್ಚೆದೆಯವನೇನೋ ನಿಜ. ಭಾರತದ ಉತ್ತರಾಪಥವು ಐಕ್ಯವುಳ್ಳದ್ದಾಗಿದ್ದರೆ, ದಕ್ಷಿಣವು ರಾಷ್ಟ್ರಧರ್ಮನಿರತವಾಗಿ ಜಾಗ್ರತವಾಗಿರುತ್ತಿದ್ದರೆ ಪ್ರತ್ಯಕ್ಷ ಕಾಲನಿಗಾದರೂ ಇಲ್ಲಿಗೆ ಬರುವದಕ್ಕೆ ಧೈರ್ಯವಾಗುತ್ತಿತ್ತೆ? ದೈವದುರ್ವಿಲಾಸದಿಂದ ಭಾರತವು ಛಿನ್ನವಿಚ್ಛಿನ್ನವಾಗಿತ್ತು; ರಾಷ್ಟ್ರಧರ್ಮದಿಂದ ಚ್ಯುತವಾಗಿತ್ತು; ಸ್ವಾಭಿಮಾನ ಶೂನ್ಯತೆಯಿಂದ ಪತಿತವಾಗಿತ್ತು; ಅಜ್ಞಾನತಮದಿಂದ ಅಂಧವಾಗಿತ್ತು. ಭಾರತವು ಇಂತಹ ಪರಿಸ್ಥಿತಿಗೆ ಬಂದುದರಿಂದಲೇ ಗಿಝನೀ ಮಹಮ್ಮೂದನು ಹದಿನೇಳು ಸಾರೆ ದಂಡೆತ್ತಿ ಬಂದು ದೇವಸ್ಥಾನಗಳನ್ನು ನಾಶಮಾಡಿದನು; ಹೇರಳವಾದ ಸುಲಿಗೆಯಿಂದ ಯವನ ಜನಪದವನ್ನು ವೈಭವಸಂಪನ್ನವಾಗಮಾಡಿದನು. ಇವನಿಗಿಂತಲೂ ಶಹಾಬುದ್ದೀನನು ಹೆಚ್ಚಾದ ಮಹತ್ವಾಕಾಂಕ್ಷೆ ತಾಳಿದವನಾಗಿದ್ದನು. ಅವನು ಬರೀ ಸುಲಿಗೆಯಿಂದ ತೃಪ್ತಿಪಡತಕ್ಕವನಿದ್ದಿಲ್ಲ; ಧರ್ಮಪ್ರಸಾರದಿಂದ ಮಾತ್ರ ತುಷ್ಟನಾಗುವಂತಿದ್ದಿಲ್ಲ; ಅವನು ಭಾರತದಲ್ಲಿ ಇಸ್ಲಾಮೀ ವರ್ಚಸ್ಸನ್ನು ನೆಲೆಗೊಳಿಸಬೇಕೆಂಬ ಆಶೆಯುಳ್ಳವನಾಗಿದ್ದನು. ಅದಕ್ಕಾಗಿ ಖೈಬರ ಘಟ್ಟದಂತಹ ಗುಡ್ಡುಗಾಡು ಪ್ರದೇಶವನ್ನೂ ಅನೇಕ ಗಿರಿನದಿಗಳನ್ನೂ ದಾಟಿ, ಆರ್ಯಾವರ್ತದಲ್ಲಿ ಪ್ರವೇಶಮಾಡಿದ್ದನು.

ಗಿಝನೀ ಮನೆತನದ ಕಡೆಯ ಅರಸನಾದ ಖುಸ್ರು ಮಲೀಕನನ್ನು ಘೋರೀ ಮನೆತನದ ಅಲ್ಲಾಉದ್ದೀನನು ಪಟ್ಟದಿಂದ ತಳ್ಳಿ ತಾನೇ ಆಧಿಪತ್ಯವನ್ನು ಆಕ್ರಮಿಸಿ

ದ್ದನು. ಅವನ ತರುವಾಯ ಗಿಝನಿಯ ರಾಜ್ಯವು ಅವನ ಮೊಮ್ಮಕ್ಕಳಾದ ಗ್ಯಾಸುದ್ದೀನ, ಶಹಾಬುದ್ದೀನರೆಂಬ ಬಂಧುಗಳಿಗೆ ದೊರೆಯಿತು. ಗ್ಯಾಸುದ್ದೀನನು ಅಫಗಾಣಿಸ್ತಾನದ ರಾಜ್ಯಕಾರಭಾರವನ್ನು ನಡೆಯಿಸತೊಡಗಿದನು; ಶಹಾಬುದ್ದೀನನು ರಾಜ್ಯ ವಿಸ್ತಾರಗೊಳಿಸುವದಕ್ಕಾಗಿ ಹಿಂದುಸ್ತಾನದ ಮೇಲೆ ದಂಡೆತ್ತಿ ಬರತೊಡಗಿದ್ದನು; ಆದರೂ ಅವನು ತನ್ನ ಬಂಧುವಿಗೆ ರಾಜ್ಯಕಾರಭಾರದಲ್ಲಿ ಚೆನ್ನಾಗಿ ನೆರವಾಗುತ್ತಿದ್ದನು.

ಧನಕನಕಸಂಪನ್ನವಾದ ಹಿಂದೂದೇಶವನ್ನು ನೋಡಿ ಶಹಾಬುದ್ದೀನನ ದುರಾಕಾಂಕ್ಷೆಯು ಜಾಗ್ರತವಾಗಿತ್ತು. ಪೃಥ್ವೀರಾಜ ಚವ್ಹಾಣ, ಸಮರಸಿಂಹ ಮೊದಲಾದ ಶೂರ ರಜಪೂತ ಅರಸರ ಮೇಲೆ ಬೀಳುವ ಧೈರ್ಯವು ಇನ್ನೂ ಅವನಲ್ಲಿದ್ದಿಲ್ಲವಾದ್ದರಿಂದ, ಸಣ್ಣ ಸಣ್ಣ ರಾಜರನ್ನು ಕೆಣಕತೊಡಗಿದ್ದನು. ಹಿಂದೆ ಗಿಝನೀಮಹಮ್ಮೂದನ ಅತ್ಯುಗ್ರವಾದ ದಾಳಿಯಿಂದ ರಜಪೂತ ರಾಜ್ಯಗಳು ಹಣ್ಣಾಗಿದ್ದರೂ, ಎಲ್ಲರೂ ಒಕ್ಕಟ್ಟಾಗಿ ಈ ಆಗಂತುಕ ಶತ್ರುವಿನ ಪಾರಿಪತ್ಯ ಮಾಡಬೇಕೆಂಬ ಬುದ್ಧಿಯು ಈಗಲೂ ಅವರಲ್ಲಿ ಹುಟ್ಟಿದ್ದಿಲ್ಲ. ಅಂತೆಯೇ ಘೋರಿಯು ರಾಜ್ಯಲೋಭದಿಂದ ಮೇಲಿಂದ ಮೇಲೆ ಹಿಂದುದೇಶವನ್ನು ನುಗ್ಗತೊಡಗಿದ್ದನು.

ಪಾಳ್ಯದಲ್ಲಿ ಭೇರಿನಾದವಾದೊಡನೆಯೇ ಎಲ್ಲ ಸೈನಿಕರು ಎದ್ದು ಪ್ರಾತರ್ವಿಧಿಗಳಿಗೆ ತೊಡಗಿದರು. ಶಹಾಬುದ್ದೀನನೂ ಅವನ ಸರದಾರರಾದ ರುಸ್ತುಮಖಾನ, ತಾತಾರಖಾನ, ನಿಸುರತಖಾನ ಮೊದಲಾದ ಸಂಗ್ರಾಮಪಟುಗಳೂ ಭಾವೀಯುದ್ಧದ ವಿಷಯವಾಗಿ ಮಾತನಾಡುತ್ತ ಡೇರೆಯಲ್ಲಿ ಕುಳಿತುಕೊಂಡಿದ್ದರು. ಹಿಂದುದೇಶವನ್ನು ಯಾವ ಯಾವ ರೀತಿಯಿಂದ ವಶಮಾಡಿಕೊಳ್ಳಬೇಕೆಂಬದರ ಬಗ್ಗೆಯೂ ಯಾವ ಯಾವ ಅರಸರನ್ನು ಯಾವ ಯಾವ ರೀತಿಯಿಂದ ಜಯಿಸಬೇಕೆಂಬದರ ಬಗ್ಗೆಯೂ ಅವರಲ್ಲಿ ಚರ್ಚೆ ನಡೆದಿತ್ತು:

“ರುಸ್ತುಮಖಾನ, ಹಿಂದುಗಳು ಹೇಗೆ ಕುರಿಗಳಂತಿರುವರು ನೋಡಿದಿರಾ? ನಾನು ದಂಡಯಾತ್ರೆಗಾಗಿ ಸಾಗಿ ಬಂದಿದ್ದರೂ ಎಲ್ಲ ರಾಜರೂ ಐಕ್ಯಭಾವದಿಂದ ನಡೆದು ಪ್ರತೀಕಾರ ಮಾಡಲಾರದವರಾಗಿರುವರು. ರಜಪೂತ ಅರಸರು ಅದ್ವಿತೀಯ ಸಮರಪಟುಗಳಿರುವರು; ಎದೆಗಾರರಿರುವರು. ಹೀಗಿದ್ದರೂ ಅವರಲ್ಲಿ ರಾಷ್ಟ್ರಭಾವನೆಯು ಲುಪ್ತಪ್ರಾಯವಾಗಿರುವದರಿಂದ ಪರಚಕ್ರಗಳ ದಾಳಿಯನ್ನು ನಿವಾರಿಸಲಾರದಾಗಿರುವರು. ಹಿಂದುಗಳಲ್ಲಿ ಸ್ವದೇಶಾಭಿಮಾನವಿರುವದೇನೋ ನಿಜ; ಆದರೆ ಅವರ ದೃಷ್ಟಿಯು ಆಕುಂಚಿತವಿರುವದು. ಅವರಲ್ಲಿ ಸಂಘಶಕ್ತಿಯಿರದ್ದರಿಂದ, ಗಿಝನೀಮಹಮ್ಮೂದನು ಭಾರತದ ಮೇಲೆ ಹದಿನೇಳು ಸಾರೆ ದಂಡೆತ್ತಿ ಬಂದು, ಹೇರಳವಾದ ಸಂಪತ್ತಿಯನ್ನು ಒಯ್ದನು. ಅವನಿಗಿಂತ ನಾವು ಹೆಚ್ಚಿನ ಕರ್ತವ್ಯಪ್ರಭಾವವನ್ನು

ತೋರಿಸಬೇಕಾಗಿರುವದು. ಮುಹಮ್ಮದನು ಎಷ್ಟೇ ಸಾಹಸ ಮಾಡಿದರೂ ಇಲ್ಲಿ ಇಸ್ಲಾಮಿಯಾ ಅಧಿಕಾರವು ನೆಲೆಗೊಳ್ಳಲಿಲ್ಲ. ನಾವು ದೀರ್ಘ ಪ್ರಯತ್ನದಿಂದ ಈ ಕೆಲಸವನ್ನು ಈಡೇರಿಸಬೇಕು." ಹೀಗೆ ಶಹಾಬುದ್ದೀನನು ನುಡಿದ ಕೂಡಲೆ ರುಸ್ತುಮಖಾನನು ಸ್ವಾಭಿಮಾನದಿಂದ:—

"ಜಹಾಪನಾಹ, ರಣವಿಕ್ರಮರಾದ ನಿಮ್ಮ ಬಲವನ್ನು ನೋಡಿ ಭರತಭೂಮಿಯು ಕಂಪಿಸತೊಡಗಿರುವದು. ನಿಮ್ಮ ಮಹತ್ವಾಕಾಂಕ್ಷೆಯು ಈಡೇರುವದೆಂದು ನನ್ನ ಮನೋದೇವತೆಯು ಹೇಳತೊಡಗಿರುವದು. ಈಗ ಉತ್ತರದ ರಜಪೂತ ರಾಜರಲ್ಲಿ ಗೃಹಕಲಹವು ಹೊತ್ತಿದಂತೆ ಭಾಸವಾಗುತ್ತಲಿರುವದು. ಈ ಮಾತಿನಲ್ಲಿ ತಥ್ಯಾಂಶವಿದ್ದರೆ, ಇಸ್ಲಾಮಿಯಾ ಧರ್ಮದ ಭಾಗ್ಯೋದಯವಾಯಿತೆಂದೇ ತಿಳಿಯುವೆನು."

"ಖಾವಿಂದ, ಜಯಚಂದ-ಪೃಥ್ವೀರಾಜರಲ್ಲಿ ವೈಮನಸ್ಸು ಹುಟ್ಟಿರುವದಾಗಿ ತಿಳಿಯುತ್ತಲಿದೆ. ದಿಲ್ಲಿಯ ತುಮಾರ ವಂಶದ ಅನಂಗಪಾಲನು ಜಯಚಂದ್ರನನ್ನು ತಿರಸ್ಕರಿಸಿ, ಪೃಥ್ವೀರಾಜನಿಗೆ ತನ್ನ ಎಲ್ಲ ರಾಜ್ಯವನ್ನರ್ಪಿಸಿದ್ದರಿಂದ ಜಯಚಂದ್ರನು ಅಸೂಯಾಪರನಾಗಿರುವನು. ಅವನು ಈಗ ಪೃಥ್ವೀರಾಜನನ್ನು ನೀರಲ್ಲಿ ನೋಡತೊಡಗಿರುವನು."

"ತಾತಾರಖಾನ, ಈ ಮಾತು ನಿಜವೇ?"

"ಖಾವಿಂದ, ನಿಜ. ಪೃಥ್ವೀರಾಜನು ದಿಲ್ಲಿಯ ಸಿಂಹಾಸನಾರೋಹಣ ಮಾಡಿದ್ದರಿಂದ ರಜಪೂತರಲ್ಲಿ ಇಬ್ಬಣವಾಗಿದೆ. ತನಗಿಂತ ಚಿಕ್ಕವನಾದ ಪೃಥ್ವೀರಾಜನು ಸಾಮ್ರಾಜ್ಯ ಸಿಂಹಾಸನಾರೂಢನಾದ್ದರಿಂದ, ಜಯಚಂದ್ರನು ತಳಮಳಿಸತೊಡಗಿರುವನು. ಅವನಿಗೆ ಕಪ್ಪ-ಕಾಣಿಕೆಯನ್ನರ್ಪಿಸಲಿಕ್ಕಿಲ್ಲೆಂದು ಜಯಚಂದ್ರನ ನಿರ್ಧರವಿರುವದು."

"ಸೇನಾಪತಿಗಳೇ, ಅನಂಗಪಾಲನು ತನ್ನ ರಾಜ್ಯವನ್ನು ಪೃಥ್ವೀರಾಜನಿಗೆ ಕೊಟ್ಟದ್ದಕ್ಕಾಗಿ ಜಯಚಂದ್ರನು ಮತ್ಸರಗ್ರಸ್ತನಾದನೇಕೆ?"

"ಖುದಾವಂತ, ಜಯಚಂದ್ರನೂ ಪೃಥ್ವೀರಾಜನೂ ಅನಂಗಪಾಲನ ದೌಹಿತ್ರರು. ಹೀಗಿದ್ದು ವಿಷಮಭಾವನೆಯಿಂದ ಅನಂಗಪಾಲನು ಪೃಥ್ವೀರಾಜನ ಹಿತವನ್ನಷ್ಟೇ ಚಿಂತಿಸಿದ್ದರಿಂದ, ಜಯಚಂದ್ರನು ಸಂತಪ್ತನಾಗಿರುವನು."

ತಾತಾರಖಾನನ ಮಾತುಗಳನ್ನು ಕೇಳಿ ಶಹಾಬುದ್ದೀನನು ನಸುನಕ್ಕನು. ಜಯಚಂದ್ರ-ಪೃಥ್ವೀರಾಜರಲ್ಲಿ ನೆಲೆಗೊಂಡ ವೈಮನಸ್ಸಿನ ಲಾಭವನ್ನು ಮಾಡಿಕೊಳ್ಳಬೇಕೆಂದು ಅವನು ಯೋಚಿಸತೊಡಗಿದನು. ತಾನು ಬಹು ದಿನಗಳಿಂದ ನಿರೀಕ್ಷಿಸುತ್ತಿದ್ದ ಪ್ರಸಂಗವು ಅನಾಯಾಸ ಪ್ರಾಪ್ತವಾಯಿತೆಂದು ಅವನಿಗೆ ಆನಂದವಾಯಿತು.

"ಖಾನಿಂದ, ಜಯಚಂದ್ರನು ಇಲ್ಲಿ ತಪ್ಪುತ್ತಿರುವನೆಂದು ಹೇಳಬಹುದು. ಪೃಥ್ವೀರಾಜನು ಗುಣ-ಶೀಲಗಳುಳ್ಳವನೂ ಶೂರನೂ ಎಂಬುದರ ಬಗ್ಗೆ ಅನಂಗ ಪಾಲನಿಗೆ ನಂಬಿಗೆಯಾಗಿ, ತನ್ನ ಸಾಮ್ರಾಜ್ಯವನ್ನು ಅವನ ವಶಕ್ಕೆ ಕೊಟ್ಟಿದ್ದಕ್ಕಾಗಿ ಜಯಚಂದ್ರನು ಮತ್ಸರಗ್ರಸ್ತನಾದದ್ದು ಅಯೋಗ್ಯವಿರುವದು."

"ನಿಸುರತಖಾನ, ನಾವು ಅದನ್ನು ತೆಗೆದುಕೊಂಡು ಮಾಡುವದೇನು? ಬಹು ದಿನಗಳಿಂದ ಹಾರೈಸಿಕೊಂಡಿದ್ದ ನನ್ನ ಮನೋದಯವು ಸಫಲವಾಯಿತೆನ್ನಲಿಕ್ಕೆ ಅಡ್ಡಿ ಯಿಲ್ಲ" ಎಂದು ನಿಸುರತಖಾನನಿಗೆ ಶಹಾಬುದ್ದೀನನು ನುಡಿದು, ತನ್ನ ದಟ್ಟವಾದ ಗಡ್ಡದ ಮೇಲೆ ಕೈ ಎಳೆಯುತ್ತ ಕುಳಿತನು.

ಸ್ವತಂತ್ರವಾಗಿ ಯುದ್ಧಮಾಡಿ ಭರತಭೂಮಿಯನ್ನು ಜಯಿಸುವಷ್ಟು ಸಾಮ ರ್ಥ್ಯವು ಶಹಾಬುದ್ದೀನನಲ್ಲಿದ್ದಿಲ್ಲ. ಒಬ್ಬನ ಸಹಾಯದಿಂದ ಮತ್ತೊಬ್ಬನನ್ನು; ಮತ್ತೊ ಬ್ಬನ ಸಹಾಯದಿಂದ ಮಗುದೊಬ್ಬನನ್ನು ಜಯಿಸಿ, ಉತ್ತರಾಪಥದಲ್ಲಿರುವ ಎಲ್ಲ ರಜಪೂತ ರಾಜ್ಯಗಳನ್ನು ಸ್ವಾಧೀನಪಡಿಸಿಕೊಂಡು, ಇಸ್ಲಾಮಿಯಾ ಅಧಿಕಾರವನ್ನು ಪ್ರಸ್ಥಾಪಿಸಬೇಕೆಂದು ಅವನು ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಜಯಚಂದ್ರ-ಪೃಥ್ವೀರಾಜರೊಳಗಿನ ಅಂತಃಕಲಹವು ತನ್ನ ಮನೋದಯವನ್ನು ಈಡೇರಿಸುವದಕ್ಕೆ ಸಾಧನವಾಗುವದೆಂದು ಅವನು ಸಂಭ್ರಮಗೊಂಡನು.

ಬಟಿಂಡಾಗಡದ ಅಮರಸಿಂಹನು ಈಗ ಪೃಥ್ವೀರಾಜನ ಮಾಂಡಲಿಕನಾಗಿದ್ದನು. ಅವನ ಸಂಸ್ಥಾನವು ಸಿಂಧಪ್ರಾಂತದಲ್ಲಿದ್ದುದರಿಂದ, ಅವನು ತನ್ನ ಮಾಂಡಲಿಕನಾಗ ಬೇಕೆಂದು ಶಹಾಬುದ್ದೀನನ ಕೋರಿಕೆಯಿತ್ತು. ಮೂಗು ಹಿಡಿದರೆ ಬಾಯಿಯು ತಾನೇ ತೆರೆಯುವದೆಂಬಂತೆ ಅಮರಸಿಂಹನನ್ನು ಕೆಣಕಿದರೆ ಪೃಥ್ವೀರಾಜನು ತಾನಾಗಿ ಯುದ್ಧಕ್ಕೆ ಬರುವನೆಂದೂ, ಜಯಚಂದ್ರನನ್ನು ತನ್ನ ಕಡೆಗೆ ಒಲಿಸಿಕೊಂಡು ಅವನ ಸಹಾಯದಿಂದ ಪೃಥ್ವೀರಾಜನನ್ನು ಹಣ್ಣು ಮಾಡಬೇಕೆಂದೂ ಶಹಾಬುದ್ದೀನನು ಹವಣಿಸಿದ್ದನು. ಹೇಗಾದರೂ ಮಾಡಿ ಪೃಥ್ವೀರಾಜನೊಡನೆ ಯುದ್ಧವನ್ನು ನಡೆಸಿ. ದಿಲ್ಲಿಯ ಅಧಿಪತ್ಯವನ್ನು ತನ್ನ ಸ್ವಾಧೀನಪಡಿಸಿಕೊಳ್ಳಬೇಕೆಂದು ಅವನು ದೀರ್ಘವಾದ ಆಕಾಂಕ್ಷೆಯನ್ನು ತಳೆದಿದ್ದನು. ದೇಶೀಯ ಅರಸರ ಸಹಾಯವಿಲ್ಲದೆ ಈ ಕಾರ್ಯವು ಈಡೇರಲಾರದೆಂದು ಅವನಿಗೆ ನಿಶ್ಚಯವಾಗಿ ಗೊತ್ತಾದ್ದರಿಂದ, ಯಾವ ರೀತಿಯಿಂದ ಲಾದರೂ ಜಯಚಂದ್ರನನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದು ಅವನು ಸಂಕಲ್ಪ ಮಾಡಿಕೊಂಡನು. ಅಮರಸಿಂಹನು ನಿರಾತಂಕದಿಂದ ತನ್ನ ಮಾಂಡಲಿಕತ್ವವನ್ನು ಒಪ್ಪುವನೋ ಇಲ್ಲವೋ ಎಂಬದನ್ನು ಅವನು ಮೊದಲು ಪರೀಕ್ಷಿಸಬೇಕಾಗಿತ್ತು. ಒಳ್ಳೆಯ ಮಾತಿನಿಂದ ಒಪ್ಪದಿದ್ದರೆ, ಬಟಿಂಡಾಗಡದ ಮೇಲೆ ದಂಡೆತ್ತಿ ಹೋಗ ಬೇಕೆಂದು ಅವನು ಗೊತ್ತುಮಾಡಿಕೊಂಡನು.

— ೫ —

"ಖಾವಿಂದ, ಅಮರಸಿಂಹನ ಬಳಿಯಲ್ಲಿ ಚಿತ್ರರೇಖೆಯೆಂಬ ಲಾವಣ್ಯವತಿಯಾದ ಯುವತಿಯಿರುವಳಂತೆ. ಅವಳು ತಮ್ಮ ಅಂತಃಪುರದಲ್ಲಿರುವದಕ್ಕೆ ಯೋಗ್ಯಳಾಗಿರುವದರಿಂದ, ಅವಳನ್ನು ಕಾಣಿಕೆಯಾಗಿ ಅರ್ಪಿಸಬೇಕೆಂದು ಅಮರಸಿಂಹನಿಗೆ ಸಂದೇಶ ಕಳುಹಿಸಿರಿ. ಅವಳ ದಿವ್ಯ ಸೌಂದರ್ಯವನ್ನು ನೋಡಿ ಹಿಂದುಗಳು ಅವಳನ್ನು ಶಾಪಭ್ರಷ್ಟ ದೇವತೆಯೆಂದು ಭಾವಿಸಿರುವರು!"

ಶಹಾಬುದ್ದೀನನ ಮಂತ್ರಿಯಾದ ಖುರಾಸನಖಾನನು ಹೀಗೆ ನುಡಿದ ಕೂಡಲೆ, ಅವನ ಕಿವಿಗಳು ನೆಟ್ಟಗಾದವು; ಅವನು ಆ ಚಂದ್ರಾನನೆಯನ್ನು ಯಾವಾಗ ನೋಡೇನೆಂದು ಆತುರಪಡತೊಡಗಿದನು.

"ವಜೀರ, ನೀವು ಆ ಸ್ತ್ರೀರತ್ನವನ್ನು ನೋಡಿಲ್ಲವೆಂದತಾಯಿತು."

"ಇಲ್ಲ; ನಾನು ಅವಳನ್ನು ಪ್ರತ್ಯಕ್ಷ ನೋಡಿಲ್ಲ. ಅವಳು ಅಪ್ರತಿಮ ರೂಪವತಿಯಿರುವಳೆಂಬದನ್ನು ನಾನು ಅನೇಕ ಜನರ ಬಾಯಿಂದ ಕೇಳಿರುವೆನು. ಖಾವಿಂದ, ಅಮರಸಿಂಹನಿಗೆ ಒತ್ತಾಯಪಡಿಸಿದರೆ ಅವನು ಆ ಇಂದುಮುಖಿಯನ್ನು ತಾನಾಗಿ ನಿಮ್ಮ ಸನ್ನಿಧಿಗೆ ತಂದೊಪ್ಪಿಸುವನು."

ಚಿತ್ರರೇಖೆಯ ಸುದ್ದಿಯು ಕಿವಿಗೆ ಬಿದ್ದಕೂಡಲೆ ಅವನ ಮೊದಲಿನ ಮಹತ್ವಾಕಾಂಕ್ಷೆಯ ಮನೋಮಂದಿರವೆಲ್ಲ ಉಧ್ವಸ್ತವಾಯಿತು. ಅವಳನ್ನು ವಶಮಾಡಿಕೊಂಡ ಮೇಲೆಯೇ ಮುಂದಿನ ಕರ್ತವ್ಯ ಮಾಡತಕ್ಕದ್ದೆಂದು ಅವನು ನಿಶ್ಚಯಿಸಿದನು. ಅಮರಸಿಂಹನು ಅವಳನ್ನು ಸ್ವಾಧೀನಪಡಿಸದಿದ್ದರೆ, ಅವನ ಪಾರಿಪತ್ಯವನ್ನು ಮಾಡಿಯೇ ತೀರಬೇಕೆಂದು ಘೋರಿಯು ನಿಶ್ಚಯಿಸಿಕೊಂಡನು: ಈ ಕಾರ್ಯ ಮಾಡುವಾಗ ಪೃಥ್ವೀರಾಜನು ಅವನ ನೆರವಿಗೆ ಬಂದರೆ, ಅವನನ್ನು ಸಹ ಗೊತ್ತಿಗೆ ಹಚ್ಚಬೇಕೆಂದು ಶಹಾಬುದ್ದೀನನು ಮನೋರಾಜ್ಯವನ್ನು ಕಲ್ಪಿಸಿದನು. ಆಗ ಅವನು ತನ್ನ ಸೇನಾಪತಿಗಳಲ್ಲೊಬ್ಬನಾದ ನಿಸುರತಖಾನನನ್ನು ಕುರಿತು:—"ನಿಸುರತಖಾನ, ಈಗಲೆ ಬಟಿಂಡಾಗಡಕ್ಕೆ ಹೋಗಿ ಅಮರಸಿಂಹನಿಗೆ ಭೆಟ್ಟಿಯಾಗಿರಿ. ಚಿತ್ರರೇಖೆಯನ್ನು ಕಾಣಿಕೆಯಾಗಿ ಕೊಟ್ಟರೆ ನಿನ್ನ ಸ್ವಾತಂತ್ರ್ಯವನ್ನು ಒಪ್ಪುತ್ತೇನೆಂದೂ, ಇಲ್ಲದಿದ್ದರೆ ನಿನ್ನನ್ನೂ ಬಟಿಂಡಾಗಡವನ್ನೂ ವಿಧ್ವಂಸ ಮಾಡಲಿಕ್ಕೆ ಶಹಾಬುದ್ದೀನನ ಅಮೋಘವಾದ ಸೇನಾಬಲವು ಸದೈವ ಸಿದ್ಧವಿರುವದೆಂದೂ ಅವನಿಗೆ ತಿಳಿಸಿರಿ. ನೀವು ಚತುರೋಪಾಯಗಳಿಂದ ಚಿತ್ರರೇಖೆಯನ್ನು ಸ್ವಾಧೀನಪಡಿಸಿಕೊಂಡು ಬಂದೀರೆಂದು ನನ್ನ ಆತ್ಮವಿಶ್ವಾಸವಿರುವದು."

ಹೀಗೆ ಶಹಾಬುದ್ದೀನ ಘೋರಿಯು ದಿವ್ಯ ಲಾವಣ್ಯವತಿಯಾದ ಚಿತ್ರರೇಖೆಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯುಳ್ಳನಾದನು!

---

ದಿಲ್ಲಿಯ ಸಮ್ರಾಟನಾದ ತೋಮರವಂಶದ ಅನಂಗಪಾಲನಿಗೆ ಪುತ್ರಸಂತಾನವಿದ್ದಿಲ್ಲ; ಇಬ್ಬರೇ ಕನ್ಯೆಯರಿದ್ದರು. ಅವರಲ್ಲಿ ಹಿರಿಯಳನ್ನು ಕನ್ಯಕುಬ್ಜದ ಅರಸನಾದ ವಿಜಯಪಾಲನಿಗೂ, ಚಿಕ್ಕವಳನ್ನು ಅಜಘೋರದ ದೊರೆಯಾದ ಸೋಮೇಶ್ವರನಿಗೂ ಕೊಟ್ಟು, ಬದರಿಕಾಶ್ರಮದಲ್ಲಿ ದೌಹಿತ್ರರಿಂದಲೇ ತನ್ನ ವಂಶೋದ್ಧಾರವಾಗಬೇಕೆಂದು ಅನಂಗಪಾಲನು ಪ್ರಬಲವಾದ ಆಶೆಯುಳ್ಳವನಾಗಿದ್ದನು. ಹಿರಿಯಳಿಗೆ ಜಯಚಂದ್ರನೆಂಬ ಮಗನು ಜನಿಸಿದ್ದನು; ಚಿಕ್ಕವಳಾದ ಕಮಲಾದೇವಿಯ ಪುತ್ರನೇ ಚವ್ಹಾಣಕುಲದೀಪಕನಾದ ಪೃಥ್ವೀರಾಜ! ಜಯಚಂದ್ರನು ಕ್ಷುದ್ರ ಮನೋವೃತ್ತಿಯವನೂ, ಅಸೂಯಾಪರನೂ, ಸ್ವಾರ್ಥಿಯೂ ಆಗಿದ್ದನು. ಪೃಥ್ವೀರಾಜನು ಅತ್ಯಂತ ಗುಣನಿಧಿಯು. ಅವನಲ್ಲಿದ್ದ ಸ್ವಾಭಿಮಾನ, ಸ್ವಜನಾನುರಾಗ, ಶೌರ್ಯ, ಸಾಹಸ ಮೊದಲಾದ ಸದ್ಗುಣಗಳನ್ನು ನೋಡಿ, ಅನಂಗಪಾಲನು ಅವನಲ್ಲಿ ಪ್ರೀತಿಯುಳ್ಳವನಾಗಿದ್ದನು. ತನ್ನ ತರುವಾಯ ದಿಲ್ಲಿಯ ರಾಜ್ಯಕ್ಕೆ ಒಡೆಯನಾಗುವದಕ್ಕೆ ಪೃಥ್ವೀರಾಜನೇ ತಕ್ಕವನೆಂದು ಅವನು ನಿರ್ಧರಿಸಿದ್ದನು. ಜಯಚಂದ್ರನನ್ನು ಪುತ್ರನೆಂದು ಸ್ವೀಕರಿಸುವದಕ್ಕಿಂತ, ಪೃಥ್ವೀರಾಜನನ್ನೇ ಪುತ್ರನನ್ನು ಮಾಡಿಕೊಳ್ಳುವದೊಳಿತೆಂದು ಅವನು ಭಾವಿಸಿದ್ದನು.

ಅನಂಗಪಾಲನು ಗುಣಗ್ರಾಹಿಯಿದ್ದನು. ಕೇವಲ ತನ್ನವನೆಂದು ಪ್ರೀತಿಸದೆ, ಗುಣಗಳನ್ನು ಚೆನ್ನಾಗಿ ಪರೀಕ್ಷಿಸಿ ಅವನ ಮೇಲೆ ಅನುರಾಗವುಳ್ಳವನಾಗುತ್ತಿದ್ದನು. ರಾಜ್ಯದೊಳಗಿನ ಕೆಲವು ಭಾಗವನ್ನು ಜಯಚಂದ್ರನಿಗೆ ಕೊಡಬೇಕೆಂದು ಕೆಲವರು ಅವನಿಗೆ ಸೂಚಿಸಿದರೂ ಅದಕ್ಕೊಪ್ಪದೆ, ತನ್ನ ಎಲ್ಲ ರಾಜ್ಯವನ್ನು ಪೃಥ್ವೀರಾಜನಿಗೆ ಕೊಡುವದಕ್ಕೆ ಸಿದ್ಧನಾಗಿದ್ದನು. ತನ್ನ ತರುವಾಯ ತನ್ನ ರಾಜ್ಯವು ಸುರಕ್ಷಿತವಾಗಿ ಉಳಿಯಬೇಕೆಂದು ಅವನು ಸದಿಚ್ಛೆಯುಳ್ಳವನಾಗಿದ್ದನು. ಅವನು ಪೃಥ್ವೀರಾಜನನ್ನು ಪುತ್ರನೆಂದು ಸ್ವೀಕರಿಸಿ, ಅವನ ಸ್ವಾಧೀನಕ್ಕೆ ತನ್ನ ಎಲ್ಲ ರಾಜ್ಯವನ್ನು ಕೊಟ್ಟನು. ಅನಂತರದಲ್ಲಿ ಶೇಷಾಯುಷ್ಯವನ್ನು ಬದರೀನಾಥನ ಸೇವೆಯಲ್ಲಿ ಕಳೆಯಬೇಕೆಂದು ತಪಶ್ಚರ್ಯಕ್ಕಾಗಿ ಬದರಿಕಾಶ್ರಮಕ್ಕೆ ತೆರಳಿದನು.

ಗುಣಗ್ರಾಹಿಯಾದ ಅನಂಗಪಾಲನು ಸುಚರಿತ್ರನಾದ ಪೃಥ್ವೀರಾಜನಿಗೆ ರಾಜ್ಯವನ್ನೊಪ್ಪಿಸಿದ್ದರಿಂದ, ಎಲ್ಲ ಪ್ರಜಾಜನರು ಸ್ವಾನಂದಸಾಮ್ರಾಜ್ಯದಲ್ಲಿ ಲೋಲಾಡತೊಡಗಿದರು. ಪ್ರಾಪ್ತವಯಸ್ಕನೂ, ಗಂಭೀರನೂ, ಉದಾರನೂ ಆದ ಪುರುಷಸಿಂಹನು ಭಾರತ ನೃಪಕುಲತಿಲಕನಾದದ್ದರಿಂದ ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ? ಪುರುಷಶ್ರೇಷ್ಠನಾದ ಪೃಥ್ವೀರಾಜನು ದಿಲ್ಲಿಯ ಸಮ್ರಾಟನಾದದ್ದರಿಂದ, ಅಖಿಲಭಾರತವಾಸಿಗಳು ಆನಂದಶರಧಿಯಲ್ಲಿ ಮುಳುಗಿರುವಾಗ ಒಂದೇ ಒಂದು ವ್ಯಕ್ತಿಯು ಒಂದೇ

ಸವನೆ ಕುದಿಯತೊಡಗಿತ್ತು. ಆ ವ್ಯಕ್ತಿಯು ಮತ್ತಾವದೂ ಇರದೆ, ಕನೋಜದ ನರಪತಿಯಾದ ಜಯಚಂದ್ರನಾಗಿದ್ದನು! ಅವನು ಅನಂಗಪಾಲನನ್ನೂ ಪೃಥ್ವೀ ರಾಜನನ್ನೂ ಮನಸೋಕ್ತ ನಿಂದಿಸತೊಡಗಿದ್ದನು. ತಾನು ಅನಂಗಪಾಲನ ಹಿರಿಯ ಮಗಳ ಮಗನಿದ್ದು, ಪೃಥ್ವೀರಾಜನಿಗಿಂತ ಹೆಚ್ಚಿನ ವಯಸ್ಸಿನವನಾಗಿದ್ದರೂ ಮಾತಾ ಮಹನು ಸರ್ವಾಧಿಕಾರವನ್ನು ಪೃಥ್ವೀರಾಜನಿಗೊಬ್ಬನಿಗೇ ಒಪ್ಪಿಸಿ, ತನ್ನ ನೀಚ ಮನೋವೃತ್ತಿಯನ್ನು ವ್ಯಕ್ತಪಡಿಸಿದನೆಂದು ಜಯಚಂದ್ರನು ಸಂತಾಪಗೊಂಡಿದ್ದನು. ಅವನ ಪತ್ನಿಯಾದ ವಿಪುಲಾದೇವಿಯೆಂತೂ ಪೃಥ್ವೀರಾಜನಲ್ಲಿ ಮಾತ್ಸರ್ಯವನ್ನು ತಳೆದು, ಅವನ ವಿಷಯಕ್ಕೆ ತನ್ನ ಪತಿಯ ಮನಸ್ಸನ್ನು ಮತ್ತಿಷ್ಟು ಕಲುಷಿತ ಮಾಡಿ ದ್ದಳು. ಪೃಥ್ವೀರಾಜನಿಗೆ ಕಪ್ಪ-ಕಾಣಿಕೆಗಳನ್ನಿತ್ತು, ಅವನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳಲಿಕ್ಕಿಲ್ಲವೆಂದೂ, ಅಧಿರಾಜನೆಂದು ಅವನೆದುರಿನಲ್ಲಿ ಬಾಗಲಿಕ್ಕಿಲ್ಲವೆಂದೂ ಜಯಚಂದ್ರನು ನಿರ್ಧರಿಸಿಕೊಂಡದ್ದನು. ಯಾವದೊಂದು ತಂತ್ರದಿಂದ ಅವನ ನಾಶವಾಗುವಂತೆ ಮಾಡಬೇಕೆಂಬ ಆಸುರೀ ಮನೋವೃತ್ತಿಯ ಜಯಚಂದ್ರನು ಇಲ್ಲದ ಕಾರಸ್ಥಾನಗಳನ್ನು ಕಲ್ಪಿಸತೊಡಗಿದ್ದನು. ಪೃಥ್ವೀರಾಜನ ನಾಶದ ಕಾರ್ಯವು ತನ್ನೊಬ್ಬನಿಂದ ಅಸಾಧ್ಯವಾದರೆ, ಪಠಾಣರ ದೊರೆಯಾದ ಶಹಾಬುದ್ದೀನನ ಸಹಾಯ ಸಹ ಬೇಡಬೇಕೆಂದು ಅವನು ಸಂಕಲ್ಪಿಸಿದ್ದನು.

ಅನಂಗಪಾಲನು ತನ್ನ ಪತಿಗೆ ಸಾಮ್ರಾಜ್ಯಾಧಿಕಾರವನ್ನು ಕೊಡುವನೆಂತು ವಿಪುಲಾದೇವಿಯು ಹಾರೈಸಿಕೊಂಡಿದ್ದಳು. ಕಡೆಗೆ ತನ್ನ ಮನೋರಥವು ಈಡೇರ ದಂತಾದ ಕೂಡಲೆ ಅವಳು ತಳಮಳಿಸತೊಡಗಿದಳು. ಬದರಿಗೆ ಹೋಗಿ ಅನಂಗ ಪಾಲನನ್ನು ಕಂಡು, ದಿಲ್ಲಿಯ ರಾಜ್ಯದೊಳಗಿನ ಅರ್ಧರಾಜ್ಯವನ್ನಾದರೂ ಕೊಡ ಬೇಕೆಂದು ಬೇಡಿಕೊಳ್ಳುವದಕ್ಕಾಗಿ ಅವಳು ತನ್ನ ಪತಿಗೆ ಹೇಳತೊಡಗಿದ್ದಳು. ಜಯ ಚಂದ್ರನಿಗಾದರೂ ಅವಳ ಅಭಿಪ್ರಾಯವು ಸರಿಯಾಗಿ ಕಂಡದ್ದರಿಂದ, ಈ ವಿಷಯ ದಲ್ಲಿ ತನ್ನ ಸೇನಾಪತಿಯಾದ ಕಹರ ಕಂಠೀರವನನ್ನು ಕೇಳಬೇಕೆಂದು ಯೋಚಿಸಿ, ಅವನನ್ನು ಅರಮನೆಗೆ ಕರೆಯಿಸಿದ್ದನು.

"ಕಂಠೀರವ, ಅನಂಗಪಾಲರಿಗೆ ನಾನೂ ಪೃಥ್ವಿಯೂ ಸಮಾನ ಆಪ್ತರಲ್ಲವೆ? ಹೀಗಿದ್ದು, ಅವರು ವೈಷಮ್ಯ ಭಾವನೆಯಿಂದ ತಮ್ಮ ಯಾವತ್ತೂ ರಾಜ್ಯವನ್ನು ಪೃಥ್ವಿಯ ಸ್ವಾಧೀನಕ್ಕೆ ಕೊಟ್ಟಿರುವರು. ಯುಕ್ತಿ-ಪ್ರಯುಕ್ತಿಗಳಿಂದ ಅವರ ಮನ ಸ್ಸನ್ನು ಒಲಿಸಿಕೊಂಡು, ಅರ್ಧರಾಜ್ಯವನ್ನು ವಶಕ್ಕೆ ತೆಗೆದುಕೊಳ್ಳಬೇಕೆಂದು ನಾನು ಯೋಚಿಸಿರುವೆನು. ಈ ವಿಷಯಕ್ಕೆ ನಿಮ್ಮ ಅಭಿಪ್ರಾಯವೇನಿರುವದು?"

ಕಹರ ಕಂಠೀರವನು ಶೂರನಿದ್ದುದೇನೋ ನಿಜ; ಆದರೆ ರಾಜಕಾರಣದಲ್ಲಿ ಅವಶ್ಯ ನಾಗಿದ್ದ ಮುತ್ಸದ್ದಿತನ ಮಾತ್ರ ಅವನಲ್ಲಿದ್ದಿಲ್ಲ. ಅವನಾದರೂ ಜಯಚಂದನಂತೆ

ತಾಮಸಿಯೂ ಶೀಘ್ರಕೋಪಿಯೂ ಆಗಿದ್ದನು. 'ಸಮಾನ ಶೀಲೇ ವ್ಯಸನೇಷು ಸಖ್ಯಂ' ಎಂಬಂತೆ, ಜಯಚಂದ್ರನು ತನ್ನ ಪ್ರಧಾನಿಗಿಂತಲೂ ಇವನಲ್ಲಿ ಒಳ್ಳೆಯ ವಿಶ್ವಾಸವುಳ್ಳವನಾಗಿದ್ದನು. ಕಂಠೀರವನಿಗೆ ಅನಂಗಪಾಲನ ವರ್ತನವು ಅಯೋಗ್ಯ ವಾಗಿ ಕಂಡದ್ದರಿಂದ ಅವನು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು:—

"ಮಹಾರಾಜರೇ, ಅನಂಗಪಾಲರು ಅಲ್ಲದ ಕೆಲಸವನ್ನು ಮಾಡಿದರು. ನೀವು ಅವರಿಗೆ ಭೆಟ್ಟಿಯಾಗಿ, ದಿಲ್ಲಿಯ ರಾಜ್ಯದೊಳಗಿನ ಅರ್ಧರಾಜ್ಯವನ್ನೂ ಸಾರ್ವಭೌಮಾ ಧಿಕಾರವನ್ನು ಪಡೆಯಲಿಕ್ಕೇಬೇಕು. ಹಾಗೆ ಮಾಡದಿದ್ದರೆ ಪೃಥ್ವೀರಾಜನಿಗೆ ಮಾಂಡಲಿಕರಾಗಬೇಕಾಗುವದು."

"ಅಂತೆಯೇ ಬೇಗನೆ ಬದರಿಗೆ ಹೋಗಿರೆಂದು ನಾನು ಇವರಿಗೆ ಹೇಳತೊಡ ಗಿರುವೆನು" ಎಂದು ವಿಪುಲಾದೇವಿಯು ನುಡಿದಳು.

"ಅವ್ವಾ, ನೀವೇನು ಹೇಳುವಿರಿ? ಬದರಿಗೆ ಹೋಗಿ ಮಾಡಬೇಕಾದುದೇನು? ತಂದೆಯೇ, ನೀವೆಲ್ಲರೂ ಪೂರಾ ಅದೂರದರ್ಶಿಗಳಿರುವಿರಿ; ಅಸೂಯಾಪರರಿರುವಿರಿ. ಅನಂಗಪಾಲರು ತಮ್ಮ ಮನಸ್ಸು ಬಂದವರಿಗೆ ರಾಜ್ಯವನ್ನು ಕೊಡುವದಕ್ಕೆ ಸಂಪೂರ್ಣ ಅಧಿಕಾರಿಗಳಿದ್ದಿಲ್ಲವೇನು? ಅವರು ಪೃಥ್ವೀರಾಜರನ್ನು ನಿಮಗಿಂತ ಹೆಚ್ಚಾಗಿ ಪ್ರೀತಿ ಸುತ್ತಿರಬಹುದು. ಹಾಗೆ ಪ್ರೀತಿಸುವದಕ್ಕೆ ಎಷ್ಟೋ ಅವಾಂತರ ಕಾರಣಗಳಾದರೂ ಇರಬಹುದು. ಅಂತೆಯೇ ಅವರು ತಮ್ಮ ರಾಜ್ಯವನ್ನು ಅವರ ಸ್ವಾಧೀನ ಮಾಡಿರು ವರು. ಅವರು ದತ್ತವಿಧಿಯಿಂದ ಪೃಥ್ವೀರಾಜರನ್ನು ಮಗನನ್ನಾಗಿ ಮಾಡಿಕೊಂಡಿರು ವರು. ನೀವು ಹೇಗೆ ಪ್ರಯತ್ನಿಸಿದರೂ ಕಾರ್ಯವಾಗದೆಂದು ನನ್ನ ಮತವಿರುವದು."

ಈ ಮಾತುಗಳು ಹೊರಟ ಕೂಡಲೆ ತನ್ನ ಮನಸ್ಸಿನ ವಿರುದ್ಧವಾಗಿ ಹೀಗೆ ಮಾತನಾಡಿದವರಾರು? ಎಂದು ಜಯಚಂದ್ರನು ತಿರುಗಿ ನೋಡಿದನು. ಅಲ್ಲಿ ತನ್ನ ಪ್ರೀತಿಯ ಪುತ್ರಿಯಾದ ಸಂಯುಕ್ತೆಯು ಮೂರ್ತಿಮಂತಾಗಿ ನಿಂತುಕೊಂಡಿದ್ದಳು. ಆಗ ಅವನು ಮಗಳ ಮೇಲೆ ಸಿಟ್ಟಾಗಿ:—"ಸಂಯುಕ್ತೇ, ನಿನಗೆ ರಾಜಕಾರಣದಲ್ಲಿ ಏನು ತಿಳಿಯುತ್ತದೆ? ಇನ್ನೊಮ್ಮೆ ಹೀಗೆ ಅಧಿಕಪ್ರಸಂಗತನ ಮಾಡುತ್ತ ಬರಬೇಡ."

ಸಂಯುಕ್ತೆಯು ಚಿಕ್ಕವಳಿದ್ದರೂ ವಿಚಾರಶೀಲಳಿದ್ದಳು. ತನ್ನ ಸಮಂಜಸ ಮಾತುಗಳು ತಂದೆಯ ಮನಸ್ಸಿಗೆ ಬಾರದ್ದನ್ನು ನೋಡಿ ಅವಳು ಸುಮ್ಮನಾದಳು. ಪೃಥ್ವೀರಾಜನಿಗೆ ರಾಜ್ಯದೊರೆತದ್ದರಿಂದ ತಾಯಿ-ತಂದೆಗಳೀರ್ವರೂ ಮತ್ಸರಗ್ರಸ್ತರಾಗಿ ತಾಂಡವನೃತ್ಯಕ್ಕೆ ಪ್ರಾರಂಭಿಸಿರುವದನ್ನು ನೋಡಿ, ಅವಳ ಮನಸ್ಸಿಗೆ ಖೇದವೆನಿಸಿತು; ಆದರೆ ಅಬಲೆಯೂ ಚಿಕ್ಕವಳೂ ಆದ ಅವಳ ಕೈಯಿಂದ ಆಗುವದೇನು? ಕಡೆಗೆ ಅನಂಗಪಾಲನನ್ನು ಕಾಣುವದಕ್ಕಾಗಿ ಬದರಿಕಾಶ್ರಮಕ್ಕೆ ಹೋಗಬೇಕೆಂದು ಜಯ ಚಂದ್ರನೂ ಕಹರ ಕಂಠೀರವನೂ ನಿರ್ಧರಿಸಿಕೊಂಡರು.

ತನ್ನ ಶೇಷಾಯುಷ್ಯವನ್ನು ಬದರೀನಾಥನ ಸೇವೆಯಲ್ಲೇ ಕಳೆಯಬೇಕೆಂದು ನಿರ್ಧರಿಸಿಕೊಂಡ ಅನಂಗಪಾಲನು ಬದರಿಕಾಶ್ರಮದಲ್ಲಿ ವಾಸವಾಗಿದ್ದನು. ಈಶೋಪಾಸನೆಯಲ್ಲಿ ಸದೈವ ಲೀನನಾದ ಅವನು ತಾನೇ ತಾನಾಗಿ ಆನಂದಮಯವಾಗಿದ್ದನು. ಸಾಂಸಾರಿಕ ಉಪಾಧಿಗಳೆಲ್ಲ ತೊಲಗಿ ಹೋಗಿ, ಭಗವತ್ಸಾನ್ನಿಧ್ಯವು ದೊರೆತ ಮೇಲೆ ಯಾವ ಆಸ್ತಿಕನಿಗೆ ಆನಂದವೆನಿಸಲಿಕ್ಕಿಲ್ಲ? ಅವನು ತನ್ನ ಆಯುಷ್ಯವು ಸಾರ್ಥಕವಾಯಿತೆಂದು ತಿಳಿದುಕೊಂಡಿದ್ದನು.

ಬದರಿಕಾಶ್ರಮದಲ್ಲಿ ಅನಂಗಪಾಲನು ಧ್ಯಾನಸ್ಥನಾಗಿ ಕುಳಿತಿದ್ದನು. ತಪಶ್ಚರ್ಯೆಯಿಂದಲೂ ವೃದ್ಧಾಪ್ಯದಿಂದಲೂ ಅವನ ಕಾಯವು ಮತ್ತಿಷ್ಟು ಕೃಶವಾಗಿತ್ತು. ಅವನ ಮುಖವು ಮಾತ್ರ ದಿವ್ಯತೇಜದಿಂದ ನೋಡುವವರ ಕಣ್ಣು ಕುಕ್ಕಿಸುವಂತಿತ್ತು. ಧ್ಯಾನಮಗ್ನನಾದ ಅವನು ಸಮ್ಮುಖದಲ್ಲಿ ಕುಳಿತ ಜಯಚಂದ್ರ-ಕಹರ ಕಂಠೀರವರನ್ನು ನೋಡಿರಲಿಲ್ಲ. ಪುರಶ್ಚರಣವು ಮುಗಿಯುವವರೆಗೆ ಅವರು ತಟಸ್ಥರಾಗಿ ಕುಳಿತುಕೊಂಡಿದ್ದರು. ಎಷ್ಟೋ ಹೊತ್ತಿನ ಮೇಲೆ ಅನಂಗಪಾಲನು ಕಣ್ಣು ತೆರೆದನು. ಎದುರಿನಲ್ಲಿ ಜಯಚಂದ್ರನೂ ಕಹರ ಕಂಠೀರವನೂ ಕುಳಿತದ್ದನ್ನು ನೋಡಿ ಅವನು ವಿಸ್ಮಯಗೊಂಡನು. ಅನಂಗಪಾಲನು ಕಣ್ಣು ತೆರೆದ ಕೂಡಲೆ ಅವರು ಅವನಿಗೆ ವಂದಿಸಿ ವಿನಯದಿಂದ ನಿಂತುಕೊಂಡರು.

"ಜಯಚಂದ್ರ! ಇದೇನು, ಅಕಲ್ಪಿತ ಆಗಮನವಾಯಿತು? ನೀವು ಬದರೀನಾಥನ ದರ್ಶನಕ್ಕಾಗಿ ಬಂದಿರಾ? ಒಳಿತಾಯಿತು. ಪೃಥ್ವೀರಾಜನು ಕ್ಷೇಮದಿಂದಿರುವನೆ? ಸಂಯುಕ್ತೆಯು ಸುಖರೂಪವೆ? ವಿಪುಲೆಯು ಒಳಿತಾಗಿರುವಳೆ? ರಾಜ್ಯವು ಸೌಖ್ಯವಾಗಿರುವದೆ?" ಎಂದು ಅನಂಗಪಾಲನು ರಾಜ್ಯದೊಳಗಿನ ಎಲ್ಲ ಸಂಗತಿಗಳನ್ನು ಕೇಳತೊಡಗಿದನು. ಅವನ ಮಾತಿಗೆ ಜಯಚಂದ್ರನು ಹೆಚ್ಚಿನ ಉತ್ತರ ಕೊಡುವಗೊಡವೆಗೆ ಹೋಗದೆ ಬರೇ 'ಹೂಂ'ಕಾರದಿಂದ ಕೆಲಸಸಾಗಿಸಿದ್ದನು. ಅನಂಗಪಾಲನ ಮಾತುಗಳು ಮುಗಿದ ಕೂಡಲೆ ಜಯಚಂದ್ರನು ಅವನನ್ನು ಕುರಿತು:—

"ನಿಮಗೆ ನಾನೂ ಅಷ್ಟೇ; ಪೃಥ್ವೀರಾಜನೂ ಅಷ್ಟೇ. ಹೀಗಿದ್ದು, ದಿಲ್ಲಿಯ ಆಧಿಪತ್ಯಕ್ಕೆ ಅವನೊಬ್ಬನನ್ನೇ ಬಾಧ್ಯಸ್ಥನನ್ನಾಗಿ ಮಾಡಬಹುದೇ? ಜಗತ್ತನ್ನೇ ಸಮದೃಷ್ಟಿಯಿಂದ ನೋಡುವ ಯೋಗಿ ಜನರ ಮಾಲಿಕೆಯೊಳಗಿನವರು ನೀವಿದ್ದರೂ, ನೀವು ಇಂತಹ ತಪ್ಪು ಕೆಲಸ ಮಾಡಿದ್ದಕ್ಕಾಗಿ ನನಗೆ ಖೇದವೆನಿಸಿದೆ."

"ಮಹಾರಾಜರೇ, ಅನಂಗಪಾಲ ಮಹಾರಾಜರು ಆಗ ಸಾರಾಸಾರ ವಿಚಾರ ಮಾಡದೆ ಕಾರ್ಯ ಮಾಡಿರುವರು. ; ಆದರೇನಾಯಿತು? ಮಹಾರಾಜರಿಂದ ಸಂದೇಶವು ಕಳಿಸಲ್ಪಟ್ಟರೆ, ಅದರಂತೆ ಪೃಥ್ವೀರಾಜರು ನಡೆಯದೆ ಇರಲಾರರು. ಅನಂಗ

ಪಾಲ ಮಹಾರಾಜರೇ, ನೀವು ದೊಡ್ಡ ಮನಸ್ಸಿನಿಂದ ಉಭಯ ದೌಹಿತ್ರರ ಹಿತ ಚಿಂತನೆ ಮಾಡುವಿರೆಂದು ಬಲವಾದ ಆಶೆಯಿದೆ."

ಜಯಚಂದ್ರನ ಮಾತು ಮುಗಿದ ಕೂಡಲೆ ಅವನ ಸೇನಾಪತಿಯಾದ ಕಹರ ಕಂಠೀರವನು ಚಾಣಕ್ಯತನದಿಂದ ಹೀಗೆ ನುಡಿದನು. ಅವರೀರ್ವರ ಮಾತಿನ ಒಲವು ಅನಂಗಪಾಲನಿಗೆ ತಿಳಿಯದಿರಲಿಲ್ಲ. ಅವರು ಬದರಿಕಾಶ್ರಮಕ್ಕೆ ಬಂದುದರ ಗೂಢವು ಅವನಿಗೀಗ ತಟ್ಟನೆ ಹೊಳೆಯಿತು. ಆಗ ಅವನು:—"ಜಯಚಂದ್ರ, ನೀನು ನನಗೆ ದೌಹಿತ್ರನು ನಿಜ. ನಿನ್ನನ್ನು ನಾನು ಪ್ರೀತಿಸುವದಿಲ್ಲವೆಂತಿಲ್ಲ. ದಿಲ್ಲಿಯ ಸಿಂಹಾಸನಕ್ಕೆ ಪೃಥ್ವೀರಾಜನೇ ಯೋಗ್ಯನೆಂದು ನನಗೆ ತಿಳಿದದ್ದರಿಂದ, ಅವನನ್ನು ನಾನು ಪುತ್ರನನ್ನಾಗಿ ತೆಗೆದುಕೊಂಡೆನು. ನಾನು ಎಲ್ಲ ರಾಜ್ಯವನ್ನು ಪೃಥ್ವೀರಾಜನಿಗೆ ಕೊಟ್ಟ ಬಗ್ಗೆ ನಿನ್ನ ಮನಸ್ಸು ವಿಷಾದಗೊಳ್ಳಬಾರದಾಗಿತ್ತು. ನೀನು ಮಾತ್ಸರ್ಯಗೊಂಡು ಇಲ್ಲಿಯವರೆಗೆ ಬಂದಿರುವೆಯಲ್ಲವೆ? ಜಯಚಂದ್ರಾ, ಪೃಥ್ವೀರಾಜನಲ್ಲಿರತಕ್ಕ ಗುಣಗಳು ನಿನ್ನಲ್ಲಿದ್ದರೆ, ನಾನು ನಿನಗಾದರೂ ನನ್ನ ರಾಜ್ಯವನ್ನು ಕೊಡುವದಕ್ಕೆ ಹಿಂದೆ-ಮುಂದೆ ನೋಡುತ್ತಿದ್ದಿಲ್ಲ. ಅವನು ಉದಾರನೂ, ಪ್ರಜಾನುರಾಗವುಳ್ಳವನೂ, ವಿಧೇಯನೂ ಇರುವನಲ್ಲದೆ, ವಿರೋಚಿತವಾದ ಸದ್ಗುಣಗಳು ಅವನಲ್ಲಿರುವವು. ಸಾರಾಸಾರ ವಿಚಾರ ಮಾಡಿ ಕಾರ್ಯಮಾಡಿದ ನನ್ನಲ್ಲಿ ಅಪರಾಧವನ್ನು ಕಲ್ಪಿಸುವಿಯಾದರೆ, ನಿನ್ನನ್ನು ಅಸೂಯಾಪರನೆಂದೂ ಕ್ಷುದ್ರಮನೋವೃತ್ತಿಯವನೆಂದೂ ಏಕೆ ಹೇಳಬಾರದು?"

"ನೀವು ಪೃಥ್ವಿಯಲ್ಲಿ ಅನುರಾಗವುಳ್ಳವರಾದ್ದರಿಂದ, ಅವನು ನಿಮಗೆ ಸದ್ಗುಣಿಯಾಗಿಯೂ, ನಾನು ದುರ್ಗುಣಿಯಾಗಿಯೂ ಕಾಣುತ್ತಿರುವೆವು. ನೀವೇ ಹೇಳಿರಿ; ಚಿಕ್ಕವನ ಮುಂದೆ ನಾನು ಬಾಗಿ ನಡೆಯಲಾ? ಅವನಿಗೆ ಕಪ್ಪ-ಕಾಣಿಕೆಗಳನ್ನು ಕೊಡಲಾ? ಛೀ! ನನ್ನಿಂದ ಕಾಲತ್ರಯದಲ್ಲಿಯೂ ಆಗಲಾರದು. ನೀವು ಪ್ರಜೆಗಳ ಹಿತವನ್ನು ಚಿಂತಿಸುತ್ತಿದ್ದರೆ, ದೇಶದಲ್ಲಿ ಐಕ್ಯವು ಪ್ರಸ್ಥಾಪಿತವಾಗಬೇಕೆಂದು ಬಯಸುತ್ತಿದ್ದರೆ, ನಿಮ್ಮ ರಾಜ್ಯದೊಳಗಿನ ಅರ್ಧವನ್ನ ನನಗೆ ಕೊಡಿರಿ; ಹಾಗೆ ಮಾಡದಿದ್ದರೆ, ನೀವು ಅಂತಃಕಲಹಕ್ಕೆ ಪ್ರೋತ್ಸಾಹಕೊಟ್ಟಂತಾಗುವದೆಂದು ಹೇಳದಿರಲಾರೆನು."

ಜಯಚಂದ್ರನು ಹೀಗೆ ನುಡಿದ ಕೂಡಲೆ ಅನಂಗಪಾಲನಿಗೆ ಅವನ ಕೃಷ್ಣ ಹೃದಯದ ಚಿತ್ರವು ಕಣ್ಣೆದುರಿನಲ್ಲಿ ಕಟ್ಟಿತು. ಅವನ ಕ್ಷುಲ್ಲಕ ಗುಣದ ಬಗ್ಗೆ ಅನಂಗಪಾಲನು ಹೇಸಿಗೊಂಡನು. ಆಗ ಅವನು ತಿರಸ್ಕಾರದಿಂದಲೂ ಕ್ರೋಧದಿಂದಲೂ: "ಜಯಚಂದ್ರ, ದತ್ತಾಪಹಾರ ಮಾಡಿ ನಾನು ಪಾಪದ ಪಾಲುಗಾರನಾಗಲಾರೆನು. ನಾನು ಮಾಡಿದ್ದನ್ನು ವಿಚಾರಪೂರ್ವಕವೇ ಮಾಡಿರುವೆನು. ಯಾವ ಬಗೆಯ ಅಂಜಿಕೆಯಿಂದಲೂ ನನ್ನ ವಿಚಾರವು ಬೇರೆಯಾಗಲಾರದು."

"ಮಹಾರಾಜರೆ, ಈ ಬಗೆಯ ಭೇದಬುದ್ಧಿಯಿಂದ ಒಳಿತಾಗಲಾರದು. ಬದರಿಕಾಶ್ರಮವಾಸಿಗಳಾದ ನಿಮ್ಮಲ್ಲಿ ಇಂತಹ ಕೀಳುತನವು ವಾಸವಾಗಬಾರದಾಗಿತ್ತು."

ಕಹರ ಕಂಠೀರವನು ಹೀಗೆ ನುಡಿದ ಕೂಡಲೆ, ಅನಂಗಪಾಲನು ಮತ್ತಿಷ್ಟು ಸಂತಪ್ತನಾಗಿ:—"ಕಂಠೀರವಾ, ರಾಜ್ಯದಲ್ಲಿದ್ದರೆ ನಿಮ್ಮಂತಹರಿಂದ ಪೀಡೆಯೊದಗುವದೆಂದು ಇಲ್ಲಿ ಬಂದರೂ ವಿಧಿಯು ಇಲ್ಲಿಯೂ ನನ್ನನ್ನು ಬಿಡಲಿಲ್ಲ" ಎಂದು ತಿರಸ್ಕಾರದಿಂದ ನುಡಿದು, ಜಯಚಂದ್ರನನ್ನು ಕುರಿತು:—"ನೀನು ಏನು ಹೇಳಿದರೂ ನನ್ನ ವಿಚಾರವು ಬೇರೆಯಾಗುವದಿಲ್ಲ. ನೀನು ಪೃಥ್ವಿರಾಜನೊಡನೆ ಸಹಕಾರಿಯಾಗಿದ್ದು, ಮೊದಲಿನಂತೆ ದಿಲ್ಲಿಯ ಸಿಂಹಾಸನದ ವಿಷಯಕ್ಕೆ ಭಕ್ತಿಯಿಂದ ನಡೆದರೇನೇ ದೇಶವು ಸೌಖ್ಯ ಹೊಂದುವದು; ಹಾಗೆ ಮಾಡದೆ ಅಂತಃಕಲಹಕ್ಕೆ ಉತ್ತೇಜನವಿತ್ತರೆ, ನೀನು ನಿನ್ನ ಹಾನಿಯನ್ನು ಬುದ್ಧಿಪೂರ್ವಕವಾಗಿ ಮಾಡಿಕೊಂಡಂತಾಗುವದು" ಎಂದು ಹೇಳಿದನು.

---

ಮುನ್ನಾ ಡಾಕು.

"ಇದರಲ್ಲಿ ನಿನ್ನ ಶಹಾಬುದ್ದೀನ ಘೋರಿಯು ಯಾರು?" "ಇಗೋ, ಇವರೇ!"

"ಇವನೋ?" "ಹೌದು, ಇವರೇ."

"ಅಮರಸಿಂಹರ ಸಂದೇಶವನ್ನು ನಿನ್ನ ಒಡೆಯನಿಗೆ ನೀನೇ ತಿಳಿಸುವೆಯೋ, ನಾನು ತಿಳಿಸಲೋ?"

"ಯಾರು ತಿಳಿಸಿದರೂ ಅಷ್ಟೇ; ನೀವೇ ತಿಳಿಸಿರಿ" ಎಂದು ನಿಸುರತಖಾನನು ಅಮರಸಿಂಹನ ಸರದಾರನಿಗೆ ಹೇಳಿದ ಕೂಡಲೆ, ಆ ಸರದಾರನು ಮುಂದೆ ಬಂದು ಶಹಾಬುದ್ದೀನನಿಗೆ ಕುರ್ನಿಸಾತ ಮಾಡಿದನು. ಆಗ ಶಹಾಬುದ್ದೀನನು ಮುಜುರೆಯನ್ನು ಸ್ವೀಕರಿಸಿ:—"ನೀನು ಯಾರು?"

"ನಾನೇ? ನಾನು ಅಮರಸಿಂಹರ ಸರದಾರನು."

ಹೀಗೆ ಆ ಸರದಾರನು ನುಡಿಯುವಷ್ಟರಲ್ಲಿ ನಿಸುರತಖಾನನು ಶಹಾಬುದ್ದೀನನಿಗೆ ಮುಜುರೆ ಮಾಡಿದನು. ಕೂಡಲೆ ಅವನು ವಿಸ್ಮಯದಿಂದ:—"ನಿಸುರತಖಾನ, ಬರಿಗೈಯಿಂದಲೇ ಬಂದಿರಾ? ಚಿತ್ರರೇಖೆಯೆಲ್ಲಿ?"

"ಶಹಾಬುದ್ದೀನ, ಚಿತ್ರರೇಖೆಯಾರು? ಅವಳಿಗೂ ನಿನಗೂ ಸಂಬಂಧವೇನು? ನೀನು ಚಿತ್ರರೇಖೆಯ ಸಂಬಂಧಿಕನೋ, ಅವಳ ಪತಿಯ ಮಂದಿರದ ಸಂಬಂಧಿಕನೋ" ಎಂದು ಅಮರಸಿಂಹನ ಸರದಾರನು ಕೇಳಿದನು.

"ಈಗ ನನಗೂ ಅವಳಿಗೂ ಯಾವ ಸಂಬಂಧವೂ ಇಲ್ಲ; ಇನ್ನು ಮೇಲೆ ಹೊಸ ಸಂಬಂಧವಾಗಬೇಕಾಗಿದೆ."

"ಹೀಗೆಯೋ?" ಆ ಸರದಾರನು ತಿರಸ್ಕಾರವ್ಯಂಜಕ ಧ್ವನಿಯಿಂದ ನುಡಿದನು: "ಶಹಾಬುದ್ದೀನ, ನಿನ್ನ ಮದುವೆಯನ್ನು ನಾನೇ ಮಾಡುವೆನು; ಚಿಂತಿಸಬೇಡ."

ಆ ಸರದಾರನ ಉನ್ಮತ್ತತನದ ಭಾಷಣವನ್ನು ಕೇಳಿ ಶಹಾಬುದ್ದೀನನು ಸೋಜಿಗಗೊಂಡನು; ಪರಕ್ಷಣದಲ್ಲಿ ಪರಮಾವಧಿಯಾದ ಸಂತಾಪವೂ ಹುಟ್ಟಿತು.

"ನಿಸುರತಖಾನ, ಅಮರಸಿಂಹನು ಇಂತಹ ಉದ್ದಾಮ ಪ್ರತಿನಿಧಿಯನ್ನೇಕೆ ಕಳುಹಿದನು? ಇವನಲ್ಲಿ ವ್ಯವಹಾರವೇ ಇದ್ದಂತೆ ಕಾಣುವದಿಲ್ಲ."

"ಏನು? ನನ್ನಲ್ಲಿ ವ್ಯವಹಾರವಿಲ್ಲವೆ? ಇಂತಹ ಮಾತುಗಳನ್ನಾಡಲಿಕ್ಕೆ ನಿನಗೆ ಅಧಿಕಾರವಿಲ್ಲ. ನೀನೇ ವ್ಯವಹಾರಶೂನ್ಯನಿರುವೆ! ಹೀಗಿದ್ದು ಎರಡನೆಯವರಿಗೆ ಹೆಸರಿಡತೊಡಗಿರುವೆಯಾ?"

"ನಿಸುರತಖಾನ, ಅಮರಸಿಂಹನು ಒಬ್ಬ ಅಡವೀ ಮನುಷ್ಯನನ್ನು ಕಳಿಸಿದಂತೆ ಕಾಣುವದು" ಎಂದು ನುಡಿದು, ಶಹಾಬುದ್ದೀನನು ಕುತೂಹಲಪೂರ್ವಕವಾಗಿ:— "ಯಾಕೆ? ಚಿತ್ರರೇಖೆಯನ್ನೇಕೆ ತರಲಿಲ್ಲ?"

"ಕೊಟ್ಟರೆ ತರಬೇಕೋ?" ಎಂದು ಆ ಸರದಾರನು ಉತ್ತರಿಸಿದನು.

"ನೀನು ಮಾತನಾಡಬೇಡ" ಎಂದು ಶಹಾಬುದ್ದೀನನು ಅಮರಸಿಂಹನ ಸರದಾರನನ್ನು ಬೆದರಿಸಿ, ನಿಸುರತಖಾನನನ್ನು ಕುರಿತು:—"ಅಮರಸಿಂಹನು ಅವಳನ್ನು ಕಳಿಸುವದಕ್ಕೆ ಒಪ್ಪಲಿಲ್ಲವೇ?"

"ನಿನಗೆ ಹೇಗೆ ಕಾಣುವದು? ನಿಸುರತಖಾನನು ಚಿತ್ರರೇಖೆಯನ್ನು ತಂದು, ಬಚ್ಚಿಟ್ಟು, ನಿನ್ನ ಮುಂದೆ ನಿಂತಿರುವನೆಂದು ತಿಳಿದಿರುವೆಯಾ? ಶಹಾಬುದ್ದೀನ, ಚಿತ್ರರೇಖೆಯನ್ನು ಅಮರಸಿಂಹರು ಧರ್ಮಪತ್ನಿಯೆಂದು ಸ್ವೀಕರಿಸಿರುವರು; ಹೀಗಿದ್ದು, ಅವಳನ್ನು ಬೇಡಬೇಕಾದರೆ ನೀನೊಳ್ಳೇ ಧೈರ್ಯವಂತ!"

"ಅವಳು ಧರ್ಮಪತ್ನಿಯಾದರೇನಾಯಿತು? ಮಾಂಡಲಿಕನಾದ ಅವನು, ನಾನು ಬೇಡಿದ ಕಾಣಿಕೆಯನ್ನು ಒಪ್ಪಿಸದಿದ್ದರೆ ಅವನನ್ನು ಅಧಿಕಾರಚ್ಯುತಿಗೊಳಿಸಬೇಕಾಗುವದು" ಎಂದು ಶಹಾಬುದ್ದೀನನು ಆ ಸರದಾರನಿಗೆ ಹೇಳಿದನು.

"ಅಮರಸಿಂಹರು ಯಾರ ಮಾಂಡಲಿಕರು? ನೀನು ಅಧಿಕಾರಚ್ಯುತಿಗೊಳಿಸುವದು ಯಾರನ್ನು? ನೀನು ಭ್ರಮಿಷ್ಟನಾದಂತೆ ತೋರುವದು. ಅಮರಸಿಂಹರು ಆರ್ಯಸಮ್ರಾಟ್ ಪೃಥ್ವೀರಾಜರ ಮಾಂಡಲಿಕರಿರುವರು."

"ನೀನು ಯಾರ ಮುಂದೆ ಮಾತನಾಡುತ್ತೀಯೆಂಬದರ ಪರಿವೆಯುಂಟೇ?"

"ಓಹೋ! ಸಂಪೂರ್ಣವಾಗಿ ಗೊತ್ತುಂಟು; ನಾನು ಶಹಾಬುದ್ದೀನ ಘೋರಿಯ ಸನ್ಮುಖದಲ್ಲಿ ಮಾತನಾಡುತ್ತಿರುವೆನು."

" ನಿಸುರತಖಾನ, ಪಿರೋಜಖಾನ, ಇವನನ್ನು ಪ್ರತಿಬಂಧದಲ್ಲಿರಿಸಿರಿ!"

"ಶಹಾಬುದ್ದೀನ, ಎಚ್ಚರದಿಂದ ಮಾತಾಡು. ಮನಬಂದಂತೆ ಆಚರಿಸಿದರೆ ಪ್ರಸಂಗವು ಕಠಿಣವಾದೀತು. ನಾನು ಒಬ್ಬ ಸರದಾರನ ಪ್ರತಿನಿಧಿಯಾಗಿ ಬಂದಿರುವೆ ನೆಂಬದನ್ನು ಮಾತ್ರ ನೀನು ಮರೆಯಬೇಡ."

ಅಮರಸಿಂಹನ ಸರದಾರನು ಶಹಾಬುದ್ದೀನನಿಗೆ ಹೀಗೆ ದರ್ಪೋಕ್ತಿಯಿಂದ ಮಾತನಾಡಿದ ಕೂಡಲೆ ಅವನು ಅತಿಶಯವಾಗಿ ರೋಷಗೊಂಡನು. ಇವನನ್ನು ಹೊಡೆಯಲೋ-ಬಡಿಯಲೋ-ಕಡಿಯಲೋ ಎಂಬಂತೆ ಅವನಿಗಾಯಿತು. ಆಗ ಅವನು ಕರ್ಕಶ ಧ್ವನಿಯಿಂದ:—"ನೀನು ಯಾರು?" "ಮನ್ನಾ ಡಾಕು."

ಶಹಾಬುದ್ದೀನನು ಮೆಟ್ಟಿಬಿದ್ದನು! ಮನ್ನಾಡಾಕೂನ ಹೆಸರನ್ನು ಕೇಳಿದ ಕೂಡಲೆ ಅವನು ಗಾಬರಿಯಾದ ಕಾರಣವೇನಿರಬಹುದು?

ಹನ್ನೆರಡನೆಯ ಶತಮಾನದ ಅಂತ್ಯಭಾಗದಲ್ಲಿ ಗಖ್ಖರರೆಂಬ ಕಾಡು ಜನರು ಪೆಂಡಾರಿಗಳಂತೆ ಒಳ್ಳೆಯ ಪ್ರಸಿದ್ಧಿಯನ್ನು ಹೊಂದಿದ್ದರು. ಇವರು ಕೊಲೆ-ಸುಲಿಗೆ ಗಳಲ್ಲಿ ಪ್ರವೀಣರಿದ್ದರು. ದೊಡ್ಡ ದೊಡ್ಡ ರಾಜರು ಸಹ ಇವರಿಗೆ ಅಂಜುತ್ತಿದ್ದರು. ಉತ್ತರ ಭಾರತದಲ್ಲಿ ಇವರ ಪುಂಡಾಟಿಕೆಯು ಮಿತಿಮೀರಿತ್ತು. ಗಖ್ಖರ ಜನರು ಹಿಂದುಗಳಂತೆ ಮುಸಲ್ಮಾನರಿಗಾದರೂ ಉಪದ್ರವ ಕೊಡುತ್ತಿದ್ದರು ಈ ಜನರು ಒಟ್ಟು ಎಂಟು-ಹತ್ತು ಸಾವಿರದ ವರೆಗಿದ್ದು, ಪ್ರಸಂಗವಿಶೇಷದಲ್ಲಿ ದೊಡ್ಡ ದೊಡ್ಡ ಸೈನ್ಯಕ್ಕೆದುರಾಗಿ ಯುದ್ಧ ಮಾಡುತ್ತಿದ್ದರು. ಇವರು ಯಾತ್ರಿಕರನ್ನೂ, ಪಾಂಥಸ್ಥ ರನ್ನೂ ಸುಲಿಯುತ್ತಿದ್ದರು. ಇವರ ಸ್ತ್ರೀಯರು ಪುರುಷರಂತೆ ಯುದ್ಧಕಾರ್ಯದಲ್ಲಿ ನೈಪುಣ್ಯವನ್ನು ಪಡೆದವರಾಗಿರುತ್ತಿದ್ದರು. ಅವರು ತಮ್ಮ ರಕ್ಷಣೆಗಾಗಿ ಯುದ್ಧ ಕೂಡ ಮಾಡುತ್ತಿದ್ದರು.

ಗಖ್ಖರ ಜನರು ಅತ್ಯಂತ ತಾಮಸಿಗಳು; ಕ್ರೂರರು. ಇವರ ವಿಷಯದ ಎಲ್ಲ ಸಂಗತಿಗಳು ಶಹಾಬುದ್ದೀನನಿಗೆ ಗೊತ್ತಿದ್ದವು. ಅಂತೆಯೇ ಗಖ್ಖರ ರಾಜನಂತಿದ್ದ ಮನ್ನಾಡಾಕೂನ ಹೆಸರನ್ನು ಕೇಳಿದೊಡನೆಯೇ ಅವನು ಮೆಟ್ಟಿ ಬಿದ್ದನು! ಪ್ರಸಂಗ ವಿಶೇಷದಲ್ಲಿ ಕ್ರೌರ್ಯದ ಪರಮಾವಧಿಯನ್ನು ತೋರಿಸಿದ ಮನ್ನಾಡಾಕೂನ ಹೆಸ ರನ್ನೂ, ಅವನ ಸಂಬಂಧದ ಎಲ್ಲ ಕಥೆಗಳನ್ನೂ ಶಹಾಬುದ್ದೀನನು ಕೇಳಿದ್ದರಿಂದ, ಆತನು ಮೂರ್ತಿಮಂತಾಗಿ ತನ್ನೆದುರು ನಿಂತದ್ದನ್ನು ನೋಡಿ ಅವನಿಗೆ ಭಯವುಂಟಾ ದದ್ದು ಸೋಜಿಗವಲ್ಲ. ಮನ್ನಾನು ಒಬ್ಬನೇ ಕೈಯಲ್ಲಿ ಸಿಲುಕಿದ್ದರಿಂದ, ಈಗ ಅವನಿಗೆ ಸ್ವಲ್ಪ ಧೈರ್ಯವುಂಟಾಯಿತು. ಆಗ ಅವನು ದರ್ಪೋಕ್ತಿಯಿಂದ:—"ಮನ್ನಾ, ನೀನು ಈಗ ಪೂರ್ಣವಾಗಿ ನನ್ನ ಕೈಯಲ್ಲಿ ಸಿಲುಕಿರುವೆ. ನಿನ್ನ ಉದ್ದಾಮತನವನ್ನು

ನಾನು ಪೂರ್ಣವಾಗಿ ಇಳಿಸುತ್ತೇನು. ನೀನು ನನ್ನ ಸೆರೆಯಾಳಿರುವೆ. ಪಿರೋಜಖಾನ, ಇವನನ್ನು ಸೆರೆಯಲ್ಲಿಡಿರಿ. ಇವನು ಪೃಥ್ವೀರಾಜನ ಪಕ್ಷದವನಿರುವದರಿಂದ, ಇವನ ಪಾರುಪತ್ಯ ಮಾಡಲೇಬೇಕಾಗಿರುವದು."

"ಶಹಾಬುದ್ದೀನ, ನಾನೀಗ ಒಬ್ಬನೇ ನಿನ್ನ ಕೈಯಲ್ಲಿ ಸಿಲುಕಿರುವೆನೆಂದು ಹೀಗೆ ಮಾತನಾಡುವೆಯೇನು? ನನ್ನನ್ನು ಹಿಡಿಯುವದು ನಿನಗೀಗ ಸಾಧ್ಯವಿದ್ದರೂ, ಅದರ ಪರಿಣಾಮವು ಮಾತ್ರ ಒಳಿತಾಗಲಾರದು. ನೀನು ನನಗೆ ತೊಂದರೆ ಕೊಟ್ಟರೆ, ನಿನ್ನ ಹಾಗು ನಿನ್ನ ಎಲ್ಲ ಪರಿವಾರದ ನಾಶ ಮಾಡುವದಕ್ಕೆ ನನ್ನ ಜನರು ಸಿದ್ಧರಿರುವರು. ನಿನ್ನ ವಿನಾಶಕಾಲವು ಸಮೀಪಿಸಿದ್ದರೆ, ನನಗೆ ತೊಂದರೆ ಕೊಡುವ ದುರ್ಬುದ್ಧಿಯು ನಿನ್ನಲ್ಲಿ ಹುಟ್ಟುವದು; ನೀನಿನ್ನೂ ನಾಲ್ಕು ದಿನ ಬಾಳಬೇಕಿದ್ದರೆ ನನಗೆ ಉಪದ್ರವ ಕೊಡದೆ ಬಿಟ್ಟು ಬಿಡುವೆ. ಶಹಾಬುದ್ದೀನ, ನೀನು ಚಿತ್ರರೇಖೆಯ ಆಶೆಯನ್ನು ಬಿಡು! ಅಮರಸಿಂಹರನ್ನು ಮಾಂಡಲಿಕರನ್ನಾಗಿ ಮಾಡಿಕೊಳ್ಳಬೇಕೆಂಬ ಭ್ರಾಂತಿಯನ್ನೂ ತೊರೆ! ಈ ಭರತಭೂಮಿಯಲ್ಲಿ ಇಸ್ಲಾಮೀ ರಾಜ್ಯವನ್ನು ನೆಲೆಗೊಳಿಸಬೇಕೆಂಬ ದುರಾಕಾಂಕ್ಷೆಯನ್ನು ತ್ಯಜಿಸು! ಅನ್ಯರ ಸ್ವತ್ತನ್ನು ಅಪಹರಿಸಬೇಕೆಂಬ ಬುದ್ಧಿಯು ಎಂದೂ ತಾರಕವೆನಿಸಲಾರದು. ಶಹಾಬುದ್ದೀನ, ನಾನು ನಿನ್ನ ಹಿತಕ್ಕಾಗಿಯೇ ಹೀಗೆ ಹೇಳುವೆನು. ಪೃಥ್ವೀರಾಜ ಚವ್ಹಾಣರು-ದಿಲ್ಲಿಯ ಸಧ್ಯದ ಸಮ್ರಾಟರು-ಪ್ರಚಂಡ ವಿಕ್ರಮಶಾಲಿಗಳಿರುವರು. ಮಹಮ್ಮದೀಯರು ನಾಲ್ಕು ದಿವಸ ಬಾಳಬೇಕೆಂದೂ ಅವರು ಸುಖದಿಂದ ಕಾಲ ಕಳೆಯಬೇಕೆಂದೂ ನಿನ್ನ ಮನಸ್ಸಿದ್ದರೆ, ಭಾರತದ ಆಶೆಯನ್ನು ಬಿಟ್ಟು ಸ್ವದೇಶಕ್ಕೆ ತೆರಳು. ಚವ್ಹಾಣ ರವಿಯ ಪ್ರಖರವಾದ ತೇಜದ ಮುಂದೆ ಗೂಬೆಯಾದ ನೀನು ನಿಲ್ಲುವದೇ ದೂರತೋಪಾಸ್ತ!"

"ಮನ್ನಾ, ನಾನು ಎಲ್ಲವನ್ನೂ ಬಲ್ಲೆನು. ಪ್ರಖರ ತೇಜದ ರವಿಯು ಖಗ್ರಾಸ ಗ್ರಹಣದಿಂದ ತೇಜೋಹೀನನಾಗುವದೂ, ಅಸ್ತಂಗತನಾಗುವದೂ ಅವನ ನೈಸರ್ಗಿಕ ಧರ್ಮವೇ ಆಗಿರುವದು. ನಿಮ್ಮ ಪೃಥ್ವೀರಾಜನು ಶೂರನೂ, ಸಾಹಸಿಯೂ, ಮಹತ್ವಾಕಾಂಕ್ಷೆಯವನೂ ಎಂಬದನ್ನು ನಾನು ಅರಿತಿರುವೆನು. ಅಂತಹ ಬಲಶಾಲಿಯನ್ನು ಯಾವ ರೀತಿಯಿಂದ ಹಣ್ಣುಮಾಡಬೇಕೆಂಬ ಮರ್ಮವನ್ನೂ ನಾನು ಬಲ್ಲವನಿದ್ದೇನೆ ಮನ್ನಾ, ನೀನು ಪೃಥ್ವೀರಾಜನಿಗೆ ಸಹಾಯಕನಲ್ಲವೆ?"

"ಹೌದು; ನಾನು ದಿಲ್ಲಿಯ ಸಮ್ರಾಟರ ಸ್ವಾಮಿನಿಷ್ಠ ಸೇವಕನಿರುವೆನು."

"ಹೀಗಿದ್ದರೆ ನೀನಿಲ್ಲಿಂದ ಪಾರಾಗಲಾರೆ. ನಿಜವಾಗಿ ಹೇಳಬೇಕಾದರೆ, ನಿನ್ನ ಆಯುಷ್ಯವು ಇಂದಿಗೆ ಮುಗಿಯಿತೆಂದು ದೃಢವಾಗಿ ನಂಬು."

" ಹೀಗೆಯೋ ?" ಮನ್ನಾನು ತಿರಸ್ಕಾರವ್ಯಂಜಕ ಧ್ವನಿಯಿಂದ ನುಡಿದು :—"ಶಹಾಬುದ್ದೀನ, ಈ ಮನ್ನಾ ಡಾಕೂನ ಸಾಮರ್ಥ್ಯವನ್ನು ಅರಿತವನಾಗಿದ್ದರೆ, ನೀನು ಇಂತಹ ಹುಚ್ಚುತನದ ಕಾರ್ಯಮಾಡುವದಕ್ಕೆ ಹೋಗುವದಿಲ್ಲ."

ಶಹಾಬುದ್ದೀನನು ಇವನ ಮಾತುಗಳನ್ನು ಕೇಳಿ ಆಲೋಚನೆಗೊಳಗಾದನು. ಇವನನ್ನು ಹಿಡಿಯುವದು ಸದ್ಯಕ್ಕೆ ಸುಸಾಧ್ಯವಿದ್ದರೂ ಹಿಂದಿನಿಂದ ಇವನ ಜನರಿಂದ ತೊಂದರೆಯಾಗುವದೆಂಬ ಮಾತು ಅವನಿಗೆ ಗೊತ್ತಿತ್ತು. ಆದರೂ ಅತ್ಯಂತ ಸಾಹಸಿಯಾದ ಇವನ ಕೊಲೆ ಮಾಡಿಸಿದರೆ, ಪೃಥ್ವೀರಾಜನ ಬಲವನ್ನು ಕಡಿಮೆ ಮಾಡಿದಂತಾಗುವದೆಂದು ಅವನು ತಿಳಿದನು. ಆಗ ಅವನು ತನ್ನ ಸರದಾರನಾದ ರುಸ್ತುಮಖಾನನನ್ನು ಕುರಿತು :—" ರುಸ್ತುಮಖಾನ, ಈ ಮದಾಂಧ ಡಾಕುವು ಪೃಥ್ವೀರಾಜನ ಅನುಯಾಯಿಯಿರುವನು. ಇವನನ್ನು ಸೆರೆ ಹಿಡಿದು ಕೊಲೆಗೆಯ್ಯಿರಿ."

" ಶಹಾಬುದ್ದೀನ, ಜೋಕೆಯಿಂದ ಮಾತನಾಡು. ನನ್ನ ದೇಹವು ಸ್ವತಂತ್ರವಿರುವದು. ಅದು ಎಂದೂ ಪರವಶತೆಯನ್ನು ಹೊಂದಲಾರದು. ಅದು ಪರಾಧೀನವಾಗಬೇಕಾದರೆ ದೇಹಾಂತರ್ಗತ ಪ್ರಾಣಜ್ಯೋತಿಯು ನೊಂದಿದ ಮೇಲೆಯೇ ಸರಿ!" ಎಂದು ನುಡಿದು, ತನ್ನ ಟೊಂಕಕ್ಕೆ ಅಲೆದಾಡುತ್ತಿದ್ದ ಖಡ್ಗವನ್ನು ಒರೆಯಿಂದ ಹಿರಿದು :—" ರುಸ್ತುಮ, ನಿನಗೆ ಜೀವವು ಬೇಡಾಗಿದ್ದರೆ ಮುಂದೆ ಬಾ!"

ಶಹಾಬುದ್ದೀನನು ಮನ್ನಾನ ಮಾತು ಕೇಳಿ ವಿಸ್ಮಿತನಾದನು. ತನ್ನ ಸೇನಾಸಾಗರದ ಮಧ್ಯದಲ್ಲಿ ನಿಂತುಕೊಂಡು ಈ ರೀತಿಯಾದ ವರ್ಚಸ್ಸಿನಿಂದ ಇಡಿ ಸೈನ್ಯವನ್ನೇ ನಡುಗಿಸುವ ಆ ಡಾಕೂನ ಅಖಂಡವಾದ ಧೈರ್ಯವನ್ನು ನೋಡಿ ಅವನಿಗೆ ಸೋಜಿಗವಾಯಿತು. ಅವನ ಸರದಾರರೂ ಸೈನಿಕರೂ ಮನ್ನಾನ ದರ್ಪೋಕ್ತಿಯನ್ನು ಕೇಳಿ ದಂಗು ಬಡೆದರು. ಅವನ ಮೈಮೇಲೆ ಏರಿ ಹೋಗುವ ಧೈರ್ಯವು ಒಬ್ಬನಿಗೂ ಆಗಲೊಲ್ಲದು. ಆ ಮನ್ನಾನು ಸೈನ್ಯದ ಈ ಅವ್ಯವಸ್ಥೆ ನೋಡಿ ಶಹಾಬುದ್ದೀನನನ್ನು ಕುರಿತು :—" ಶಹಾಬುದ್ದಿನ, ನಿನ್ನ ಸೈನ್ಯದ ಗಟ್ಟಿತನವನ್ನು ಚೆನ್ನಾಗಿ ಪರೀಕ್ಷಿಸು. ಇಂತಹ ಹೇಡಿಗಳನ್ನು ನಂಬಿ, ಸ್ವದೇಶವನ್ನು ತ್ಯಜಿಸಿ, ಇಲ್ಲಿಯ ವರೆಗೆ ಬಂದಿರುವೆ. ಹಿಂದುಗಳು ಒಕ್ಕಟ್ಟಿನಿಂದ ನಿನ್ನ ಮೇಲೆ ಬಿದ್ದರೆ, ಸುದ್ದಿಯನ್ನು ಹೇಳುವದಕೆ ಒಬ್ಬನೂ ಕೂಡ ಉಳಿಯಲಿಕ್ಕಿಲ್ಲ! ನನ್ನನ್ನು ಹಿಡಿಯುವದು ದೊಡ್ಡ ಮಾತಲ್ಲ. ಹೀಗಿದ್ದರೂ ನಿನ್ನ ಸೈನಿಕರು ಹೇಗೆ ತಟಸ್ಥರಿರುವರು ಕಂಡೆಯಾ? ಇಂತಹರು ನಿನ್ನನ್ನು ಚನ್ನಾಗಿ ಮೋಸಗೊಳಸುವರು."

ಮನ್ನಾನು ಶಹಾಬುದ್ದೀನನನ್ನು ರೇಗಿಗೆಬ್ಬಿಸುವದಕ್ಕೆಂದು ಬುದ್ಧಿಪೂರ್ವಕ ಹೀಗೆ ನುಡಿದನು. ಅವನ ಮಾತುಗಳನ್ನು ಕೇಳಿ ಶಹಾಬುದ್ದೀನನಿಗೆ ಸಿಟ್ಟುಬಂದಿತು.

ಒಬ್ಬ ಡಾಕುವನ್ನು ಸೆರೆ ಹಿಡಿಯುವದು ತನ್ನ ಸೈನಿಕರಿಂದ ಆಗದ್ದನ್ನು ನೋಡಿ ಅವನು ಅತ್ಯಂತ ಸಂತಪ್ತನಾದನು.

“ ಹೂಂ! ಏನು ನೋಡುತ್ತೀರಿ ? ಇವನನ್ನು ಈಗಲೆ ಬಂಧಿಸಿರಿ. ಹೇಡಿಗಳಾದ ನಿಮ್ಮಿಂದ ಈ ಕಾರ್ಯವಾಗದಿದ್ದರೆ ಬಾಣದಿಂದ ಹೊಡೆದು, ಇವನನ್ನು ಕೊಲ್ಲಿರಿ!”

ಶಹಾಬುದ್ದೀನನು ಹೀಗೆ ಕ್ರೋಧಸಂತಪ್ತನಾಗಿ ನುಡಿದ ಕೂಡಲೆ, ಸೈನಿಕರು ಮನ್ನಾನನ್ನು ಹಿಡಿಯುವದಕ್ಕಾಗಿ ಮುಂದುವರಿದರು. ಕೂಡಲೆ ಅವನು ಕೊಂಬನ್ನೂದಿದನು; ಮತ್ತು ಪವಿತ್ರದ ಮೇಲೆ ನಿಂತು ತನ್ನ ಕರಾಲ ಖಡ್ಗವನ್ನು ಒಳ್ಳೆಯ ವೇಗದಿಂದ ತಿರುವತೊಡಗಿದನು. ಅವನು ಖಡ್ಗವನ್ನು ತಿರುವುತ್ತ ಸೈನ್ಯ ಮಧ್ಯದಲ್ಲಿ ಪ್ರವೇಶಿಸಿದ ಕೂಡಲೆ, ಶಹಾಬುದ್ದೀನನ ಸೈನಿಕರು ಚದರಿದರು. ಇನ್ನು ಮೇಲೆ ಬಾಣದಿಂದ ಅವನನ್ನು ಹೊಡೆಯಬೇಕೆಂದು ಕೆಲವು ಜನರು ಧನುಸ್ಸಿಗೆ ಅಂಬುಗಳನ್ನು ಹೂಡತಕ್ಕವರು! ಅಷ್ಟರಲ್ಲಿ ‘ ಜಯ ಏಕಲಿಂಗಜೀ! ಜಯ ಹಿಂದುಮಾತೇ! ’ ಎಂದು ಭಯಂಕರವಾದ ರಣಗರ್ಜನೆಯು ಸೈನ್ಯಮಧ್ಯದಿಂದ ಹೊರಟಿತು!

ಮನ್ನಾನ ಸೈನಿಕರಾದ ಗಬ್ಬರ ಜನರು ಯವನ ಸೈನಿಕರ ವೇಷದಿಂದ ಮುಂಚಿತವಾಗಿಯೇ ಶಹಾಬುದ್ದೀನನ ಸೈನ್ಯದಲ್ಲಿ ಬೆರೆತುಕೊಂಡಿದ್ದರು. ತಮ್ಮ ಒಡೆಯನು ಕೊಂಬನ್ನೂದಿ ಸಂಜ್ಞೆ ಮಾಡಿದ ಕೂಡಲೆ, ಅವರು ಶಸ್ತ್ರವನ್ನು ಹಿರಿದು ಯವನರನ್ನು ಸಂಹರಿಸತೊಡಗಿದರು. ತನ್ನ ಸೈನ್ಯದಲ್ಲಿಯೇ ಯಾದವಿಯು ಉದ್ಭವಿಸಿದ್ದನ್ನು ನೋಡಿ ಶಹಾಬುದ್ದೀನನಿಗೆ ಆಶ್ಚರ್ಯವಾಯಿತು. ಇದೆಲ್ಲ ಮನ್ನಾನ ಮಂತ್ರಪ್ರಭಾವನೆಂದು ಅವನು ತಿಳಿದನು. ಸುಮಾರು ಮೂರು ತಾಸಿನ ವರೆಗೆ ಯುದ್ಧವು ನಡೆದು, ಶಹಾಬುದ್ದೀನನ ಸೈನಿಕರು ಹಣ್ಣುಗಾಯಿ-ನೀರುಗಾಯಿಯಾದ ಕೂಡಲೆ, ಮನ್ನಾನು ತನ್ನ ಸೈನಿಕರನ್ನು ಕರೆದುಕೊಂಡು ಸಿಕ್ಕಷ್ಟು ಸುಲಿಗೆಯೊಡನೆ ಅಲ್ಲಿಂದ ಪಾರಾದನು!

—·—

ಪೃಥ್ವೀರಾಜನ ಪಕ್ಷದವನೊಬ್ಬನು ಆಗಂತುಕನಾಗಿ ಬಂದು ತನ್ನ ಸೈನ್ಯವನ್ನು ನಾಶ ಮಾಡಿದ್ದರಿಂದ ಸಹಾಬುದ್ದೀನ ಘೋರಿಯು ಪ್ರತಿಪಕ್ಷಿಗಳ ವಿಷಯಕ್ಕೆ ಖತಿಗೊಂಡಿದ್ದನು. ಮೊದಲು ಪೃಥ್ವಿರಾಜ ನನ್ನು ಸೋಲಿಸಿ, ಅವನ ರಾಜ್ಯವನ್ನು ಸ್ವಾಧೀನಪಡಿಸಿ ಆದರ್ಶ ಅಂಗನೆ ಕೊಳ್ಳುವದು ಘೋರಿಗೆ ಆದ್ಯ ಕರ್ತವ್ಯವಾಗಿ ತೋರಿತು. ಪೃಥ್ವೀರಾಜನು ಪರಾಭೂತನಾದರೆ ಅವನ ಕೈಕೆಳಗಿನ ಎಲ್ಲ ಮಾಂಡಲಿಕ ರಾಜರು ತನಗೆ ವಿಧೇಯರಾಗುವರೆಂದು ಆ ರಾಜ್ಯಲೋಭಿಯು ಎಣಿಕೆ ಹಾಕತೊಡಗಿದನು. ಅತ್ಯಂತ ಬಲಶಾಲಿಯಾದ ಪೃಥ್ವೀರಾಜನನ್ನು ಸೋಲಿಸುವದು ಸಾಮಾನ್ಯ ತರಗತಿಯ ಕೆಲಸವಲ್ಲವೆಂಬದನ್ನು

ಶಹಾಬುದ್ದೀನನು ಮನಗಂಡದ್ದರಿಂದ, ಸ್ವದೇಶದಿಂದ ಹೊಸ ಸೈನ್ಯವನ್ನೂ ಶೂರರಾದ ಸೇನಾಪತಿಗಳನ್ನೂ ಕರೆಯಿಸಿದ್ದನು. ಇಷ್ಟುಬಗೆಯಾಗಿ ಸಿದ್ಧತೆಯನ್ನು ಮಾಡಿ ಕೊಂಡಿದ್ದರೂ ಭಾರತದೊಳಗಿನ ಕೆಲವು ಅರಸರನ್ನು ತನ್ನ ಕಡೆಗೆ ಒಡೆಸಿಕೊಳ್ಳುವದು ಅವಶ್ಯವೆಂದು ಅವನು ಭಾವಿಸಿದ್ದನು. ಗುಜರಾಥದ ಅರಸನಾದ ಭೀಮದೇವನನ್ನೂ ಕನೋಜದ ಜಯಚಂದ್ರನನ್ನೂ ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದು ಅವನು ಸಾಹಸ ನಡೆಯಿಸಿದನು. ಹಾಗೆ ಯಾರ ನೆರವು ದೊರೆಯದಿದ್ದರೂ ತಾನೊಬ್ಬನೇ ಚವ್ಹಾಣ ಸಮ್ರಾಟನನ್ನು ಎದುರಿಸಬೇಕೆಂಧೂ ಅವನು ದೃಢನಿಶ್ಚಯ ಮಾಡಿಕೊಂಡಿದ್ದನು.

ಈಗ ಜಯಚಂದ್ರನ ಮನಸ್ಸು ಇತ್ತಂಡವಾಗಿತ್ತು. ಶಹಾಬುದ್ದೀನನ ವಿನಂತಿಯ ಮೇರೆಗೆ ಅವನಿಗೆ ಸಹಾಯ ಮಾಡಬೇಕೋ, ಪೃಥ್ವೀರಾಜನ ಬೇಡಿಕೆಯಂತೆ ಅವನ ಸಹಾಯಕ್ಕಾಗಿ ಹೋಗಬೇಕೋ ಎಂಬದರ ಬಗ್ಗೆ ಅವನ ಮನಸ್ಸು ಹೊಯ್ದಾಡತೊಡಗಿತ್ತು. ಘೋರಿಗೆ ಸಹಾಯ ಮಾಡಿ ಪ್ರತಿಸ್ಪರ್ಧಿಯಾದ ಪೃಥ್ವೀರಾಜನ ಏಳ್ಗೆಯನ್ನು ಕುಗ್ಗಿಸುವದು ಶ್ರೇಯಸ್ಕರವೂ ಸ್ವೋತ್ಕರ್ಷಸಾಧನವೂ ಎಂದು ಅವನು ತಿಳಿದಿದ್ದನು. ಪೃಥ್ವೀರಾಜನಿಗೆ ಸಹಾಯ ಮಾಡಿದರೆ ಅವನ ವರ್ಚಸ್ಸು ಹೆಚ್ಚಾಗುವದೆಂದು ಆ ಮತ್ಸರಗ್ರಸ್ತ ಪಿಶಾಚಿಯು ಭಾವಿಸಿ, ಘೋರಿಗೆ ಸಹಾಯ ಮಾಡುವದೇ ಉಚಿತವೆಂದು ತಿಳಿದನು. ಈ ಹಂಚಿಕೆಯು ಅವನ ಮಂತ್ರಿಗೂ, ಸೇನಾಪತಿಯಾದ ಕಹರ ಕಂಠೀರವನಿಗೂ ಸರಿಹೋಯಿತು.

ಜಯಚಂದ್ರನ ವಾತ್ಸಲ್ಯದ ಕುವರಿಯಾದ ಸಂಯುಕ್ತೆಯು ಒಳ್ಳೇ ರಾಷ್ಟ್ರಾಭಿಮಾನವುಳ್ಳವಳೂ ಧೋರಣೆಯೂ ಆಗಿದ್ದಳು. ಅವಳು ಚಿಕ್ಕವಳಾಗಿದ್ದರೂ ಸಮಂಜಸ ವಿಚಾರವುಳ್ಳವಳಾಗಿದ್ದಳು. ತಂದೆಯ ಕ್ಷುದ್ರಮನೋವೃತ್ತಿಯನ್ನು ಅವಳು ಮನಸಾ ನಿಂದಿಸುತ್ತಿದ್ದಳು. ತಂದೆಯು ಪೃಥ್ವೀರಾಜನ ವಿಷಯಕ್ಕೆ ಮತ್ಸರಗ್ರಸ್ತನಾಗಿರುವದನ್ನು ಅವಳು ತಿಳಿದಿದ್ದಳು. ಗೃಹಭೇದಿಯಾಗಿ ಆತ್ಮಘಾತ ಮಾಡಿಕೊಳ್ಳುವದಲ್ಲದೆ, ದೇಶದ ನಾಶವನ್ನೂ ಮಾಡಲುದ್ಯುಕ್ತನಾದ ತನ್ನ ತಂದೆಯ ಅಲ್ಲದ ಆಚರಣೆಯನ್ನು ನೋಡಿ ಅವಳು ವಿಷಾದಗೊಂಡಳು. ಯುಕ್ತಿ-ಪ್ರಯುಕ್ತಿಗಳಿಂದ ತಂದೆಯ ಮನಸ್ಸನ್ನು ತಿರುಗಿಸಬೇಕೆಂಬ ಉದ್ದೇಶದಿಂದ ಅವಳು ಅವನ ಬಳಿಗೆ ಬಂದು ವಿನಯದಿಂದ:—"ಅಪ್ಪಾ, ನೀವೂ ಪೃಥ್ವೀರಾಜರೂ ಪರಸ್ಪರ ವೈರಭಾವವುಳ್ಳವರಾಗಿದ್ದರೂ ಪರಕೀಯ ಶತ್ರುವು ಆಗಮಿಸಿರುವಾಗ, ಅಂತಃಕಲಹವನ್ನು ಮರೆತು ನಡೆಯುವದು ಹಿತಕರವು. ಶಹಾಬುದ್ದೀನನಿಗೆ ಸಹಾಯ ಮಾಡಬೇಕೆನ್ನುವ ವಿಚಾರವನ್ನು ನೀವು ಬಿಟ್ಟುಬಿಡಿರಿ. ನೀವು ಸ್ವಜನದ್ರೋಹಿಗಳಾಗಿ ನಡೆಯುವದರಿಂದ ಘೋರಿಯ ಮಹತ್ವಾಕಾಂಕ್ಷೆಯು ಸಫಲವಾಗುವದಕ್ಕೆ ಅನುಕೂಲವಾಗುವದು."

"ಸಂಯುಕ್ತೇ, ನಾನು ಆಮರಣವಾಗಿ ಆ ನೀಚ ಪೃಥ್ವಿಯ ವೈರ ಬಳೆಯಿಸ ತಕ್ಕವನೇ. ಅವನ ನಾಶ ಮಾಡುವದಕ್ಕಾಗಿ ನಾನು ಎಂತಹ ನೀಚ ಕೃತ್ಯ ಮಾಡುವ ದಕ್ಕೂ ಹೇಸುವದಿಲ್ಲ." "ಇಷ್ಟೇಕೆ ದುರಾಗ್ರಹ?"

"ಪೃಥ್ವಿಯು ನನ್ನ ಅಹಿವೈರಿಯು. ಅವನು ದಿಲ್ಲಿಯ ಸಿಂಹಾಸನದಲ್ಲಿ ಎಂದು ಕುಳಿತನೋ ಅಂದೇ ನನ್ನ ವೈರಿಯಾದನು. ಇವೆಲ್ಲ ಅನರ್ಥಪರಂಪರೆಗಳಿಗೆ ನಿನ್ನ ಮಾತಾಮಹರಾದ ಅನಂಗಪಾಲರೇ ಕಾರಣರು. ತಮ್ಮ ಕ್ಷುದ್ರತನದ ಹಾಗು ಅಸೂಯೆಯ ಫಲವನ್ನು ಅವರು ಇಡಿ ದೇಶಕ್ಕೆ ಉಣಬಡಿಸಿರುವರು. ಸಂಯುಕ್ತೆ, ನಾನು ಪೃಥ್ವಿಯೊಡನೆ ವೈರ ಬಳೆಯಿಸವೆ ಹೇಗೆ ಬಿಡಲಿ? ದಿಲ್ಲಿಯ ಸಾಮ್ರಾಜ್ಯ ಸಿಂಹಾಸನಕ್ಕೆ ನಾನು ಪೃಥ್ವಿಗಿಂತ ಹೆಚ್ಚು ಬಾಧ್ಯಸ್ಥನಲ್ಲವೆ? ಅನಂಗಪಾಲರ ಸರ್ವ ಸ್ಥಿರ-ಚರ ಸ್ವತ್ತಿನ ಮೇಲೆ ಪೃಥ್ವಿಗಿಂತ ಹಿರಿಯನಾದ ನನ್ನ ಅಧಿಕಾರವು ಹೆಚ್ಚಾಗಿರುವದಿಲ್ಲವೆ? ಏನಿಲ್ಲೆಂದರೂ ಅರ್ಧಪಾಲಾದರೂ ನನಗೆ ದೊರೆಯುವದು ಯೋಗ್ಯವಾದದ್ದಲ್ಲವೆ? ಹೀಗಿದ್ದು ಅನಂಗಪಾಲರು ನೀಚತನಕ್ಕಿಳಿಸಿ, ಎಲ್ಲ ಸ್ವತ್ತಿನ ಮೇಲೆ ಪೃಥ್ವಿಯನ್ನೇ ಒಡೆಯನನ್ನು ಮಾಡಿದರು. ಕುವರೀ, ಈ ಹೊಟ್ಟೆಯೊಳಗಿನ ಉರಿಯು ಹೇಗೆ ಶಾಂತವಾದೀತು? ನಾನು ಅಧಿರಾಜ ಸಿಂಹಾಸನದಲ್ಲಿ ವಿರಾಜಮಾನನಾದೆನೆಂಬ ಮದದಿಂದ ಪೃಥ್ವಿಯು ಕಪ್ಪ-ಕಾಣಿಕೆಗಳನ್ನರ್ಪಿಸಬೇಕೆಂದು ನನ್ನ ಮೇಲೆ ಒತ್ತಾಯ ನಡೆಯಿಸಿ, ಹೊತ್ತುವ ಕಿಚ್ಚಿನಲ್ಲಿ ಎಣ್ಣೆ ಎರಚುತ್ತಿರುವನು. ಸಂಯುಕ್ತೆ, ಹೀಗಿದ್ದ ಮೇಲೆ ನಾನು ಅವನ ನಾಶಕ್ಕಾಗಿ ಏಕೆ ಯತ್ನಿಸಲಾಗದು?"

"ದೇವಿಯವರೇ, ಪೃಥ್ವೀರಾಜರು ಜಾಣರಾಗಿದ್ದರೆ ಕಪ್ಪ-ಕಾಣಿಕೆಯ ಸಲುವಾಗಿ ಮಹಾರಾಜರಿಗೆ ತೊಂದರೆ ಕೊಡುತ್ತಿರಲಿಲ್ಲ. ಗೃಹಕಲಹದ ಬೀಗೆ ಹಬ್ಬಿಸಬೇಕೆಂಬದು ಅವರ ಮನಸ್ಸಿನಲ್ಲೇ ಇರುವಂತೆ ತೋರುತ್ತದೆ" ಎಂದು ಕಹರಕಂಠೀರವ ಸೇನಾಪತಿಯು ನುಡಿದನು. ತಂದೆಯ ಹಾಗು ಸೇನಾಪತಿಯ ಮೂರ್ಖತನದ ವಿಚಾರಗಳನ್ನು ಕೇಳಿ ಸಂಯುಕ್ತೆಯು ನೊಂದುಕೊಂಡಳು. ಆಗ ಅವಳು ಸೇನಾಪತಿಯನ್ನು ಕುರಿತು:—"ನೀವು ಸುವಿಚಾರಿಗಳೆಂದು ಇಂದಿನ ವರೆಗೆ ಭಾವಿಸಿದ್ದೆನು. ನಿಸ್ಪೃಹವೃತ್ತಿಯಿಂದ ಅಭಿಪ್ರಾಯ ಕೊಡುವದು ಸಮಂಜಸ ಬುದ್ಧಿಯವರಿಗೆ ಯೋಗ್ಯವಾಗಿರುವದು. ಕೇವಲ ಬಾಲಬಡೆಯುವ ಉದ್ದೇಶವು ನಿಮ್ಮಂತಹ ದೊಡ್ಡ ಅಧಿಕಾರಿಗಳಲ್ಲಿರಕೂಡದು. ರಾಜ್ಯದ ಹಿತಾಹಿತಗಳ ಸಂಬಂಧವು ನಿಮ್ಮಂತಹರಿಗೆ ಅತ್ಯಂತ ನಿಕಟವಾಗಿರುವದೆಂಬದನ್ನು ಮರೆಯತಕ್ಕದ್ದಲ್ಲ. ಸೇನಾಪತಿಗಳೇ, ಪೃಥ್ವೀರಾಜರು ಸಮ್ರಾಟಸಿಂಹಾಸನದಲ್ಲಿ ಕುಳಿತ ಮೇಲೆ ಮಾಂಡಲಿಕರಿಂದ ಕಾಣಿಕೆಯನ್ನೇಕೆ ತೆಗೆದುಕೊಳ್ಳಬಾರದು? ಇದರಲ್ಲಿ ಅವರ ತಪ್ಪೇನು?"

"ಸಂಯುಕ್ತೇ, ಈ ವಿಷಯ ನಿನಗೆ ತಿಳಿಯದು."

"ಎಲ್ಲವೂ ಗೊತ್ತಾಗುವದು. ನಾನು ನಿಮ್ಮ ಹೃದಯದ ಕೃಷ್ಣಚಿತ್ರವನ್ನು ಪೂರ್ಣವಾಗಿ ಕಂಡುಹಿಡಿದಿರುವೆನು. ತಂದೆಯುವರೇ, ಗೃಹಕಲಹದ ಕಟುತರವಾದ ಫಲವನ್ನು ಇಡಿ ರಾಷ್ಟ್ರಕ್ಕೇ ಉಣಬಡಿಸಬೇಕೆಂಬ ನಿಮ್ಮ ಕ್ಷುದ್ರ ವಿಚಾರಗಳನ್ನು ನಾನು ಎಂದೋ ಕಂಡು ಹಿಡಿದಿರುವೆನು. ಪರಕೀಯ ಶತ್ರುವಾದ ಶಹಾಬುದ್ದೀನನಿಗೆ ಸಹಾಯಮಾಡಿ, ಪೃಥ್ವೀರಾಜರ ನಾಶಮಾಡಬೇಕೆಂಬ ನಿಮ್ಮ ಕೃಷ್ಣಕಾರಸ್ಥಾನವು ಕಡೆಗೆ ನಿಮ್ಮನ್ನೇ ನಾಶಮಾಡುವವೆಂದು ನಿಶ್ಚಯವಾಗಿ ಹೇಳುವೆನು. ಪೃಥ್ವೀರಾಜರನ್ನು ನಾಶಮಾಡಿದ ಶಹಾಬುದ್ದೀನನು ನಿಮ್ಮನ್ನು ನಾಶಗೊಳಿಸಲಿಕ್ಕಿಲ್ಲವೆಂದು ಯಾರು ಹೇಳಬೇಕು? ಅಪ್ಪಾ, ಚೆನ್ನಾಗಿ ವಿಚಾರಿಸಿ ಕಾರ್ಯ ಮಾಡಿರಿ. ಮೊದಲು ತಪ್ಪು ಕೆಲಸ ಮಾಡಿದರೆ ಹಿಂದಿನಿಂದ ಕುದಿಯುತೊಡಗುವ ಹೊತ್ತು ಬಾರದೆ ಇರಲಾರದು" ಎಂದು ಸಂಯುಕ್ತೆಯು ನುಡಿದಳು. ಆಗ ಜಯಚಂದ್ರನು ವಿಚಾರದಲ್ಲಿ ಮಗ್ನನಾಗಿದ್ದನು. ಅವನ ಮನಸ್ಸಿನ ಹರಿಯು ಶಹಾಬುದ್ದೀನನ ಕಡೆಗೇ ಸಾಗಿತ್ತು. ಪೃಥ್ವೀರಾಜನನ್ನು ಸೀರಲ್ಲಿ ನೋಡುತ್ತಿದ್ದನಾದ್ದರಿಂದ ಅವನಿಗೆ ಮಗಳ ಹಿತೋಕ್ತಿಗಳು ಹೇಗೆ ರುಚಿಸಬೇಕು? ತಂದೆಯು ಸುಮ್ಮನೆ ಕುಳಿತದ್ದನ್ನು ನೋಡಿ ಸಂಯುಕ್ತೆಯು ತಲ್ಲಣಿಸತೊಡಗಿದಳು. ಅವನು ಪೃಥ್ವೀರಾಜನ ವಿರುದ್ಧವಾಗಿ ಶಹಾಬುದ್ದೀನನಿಗೆ ಸಹಾಯ ಮಾಡುವದಕ್ಕೆ ಸಿದ್ಧನಾಗುವನೆಂಬ ಲಕ್ಷಣ ಕಾಣತೊಡಗಿದ್ದರಿಂದ ಅವಳು ಸಂತಪ್ತಳಾದಳು. ಆಗ ಆಕೆ ಮತ್ತೆ:—"ದಿಲ್ಲಿಯ ಸಿಂಹಾಸನವು ಉತ್ತರಾಪಥಕ್ಕೆಲ್ಲ ವರಿಷ್ಠವಲ್ಲವೆ? ಅದರ ಮೇಲೆ ಪೃಥ್ವೀರಾಜರಿದ್ದರೇನು, ಅನಂಗಪಾಲರಿದ್ದರೇನು; ಮತ್ತಾರಾದರೂ ಇದ್ದರೇನು? ಅವರಲ್ಲಿ ಮಾಂಡಲಿಕರಾಜರು ನಿಷ್ಠೆಯಿಂದ ನಡೆಯುವದೇ ಯುಕ್ತವು. ನೀವು ಇಲ್ಲದ ದುರಭಿಮಾನದಿಂದ ನಡೆದು, ಸರ್ವನಾಶಕ್ಕೆ ಪ್ರವೃತ್ತರಾಗುವಿರೆಂಬಂತೆ ನನಗೆ ತೋರುವದು. ಅಪ್ಪಾ, ಆರ್ಯಾವರ್ತದ ರಾಜ್ಯವನ್ನು ಮ್ಲೇಂಛರ ಪಾಲುಮಾಡಬೇಕೆಂಬ ನಿಮ್ಮ ಆಚರಣೆಯು ಅತ್ಯಂತ ಗರ್ಹ್ಯವೆಂದು ಏಕೆ ಅನ್ನಬಾರದು? ಸ್ವಜನ, ಸ್ವದೇಶ, ಸ್ವಧರ್ಮ ಮೊದಲಾದವುಗಳ ವಿಷಯಕ್ಕೆ ನಿಮ್ಮಲ್ಲಿ ಅಭಿಮಾನವಿದ್ದರೆ, ನೀವು ಪೃಥ್ವೀರಾಜರ ಬೆಂಬಲರಾಗಿ ಘೋರಿಯನ್ನು ಘಟ್ಟದಾಚೆಗೆ ಓಡಿಸಿರಿ! ಹಿಂದಕ್ಕೆ ಗಿಝನೀ ಮಹಮ್ಮೂದನಿಂದ ಅನೇಕ ಬಗೆಯ ಸಂಕಟಗಳನ್ನನುಭವಿಸಿದ್ದನ್ನು ನಿಜವಾದ ಹಿಂದುವು ಎಂದೂ ಮರೆಯುವಂತಿಲ್ಲ. ಹೀಗಿದ್ದು ಮತ್ತೆ ಅಂತಹ ವಿಪತ್ತನ್ನನುಭವಿಸಬೇಕೆಂದು ಇಚ್ಛಿಸುವವರನ್ನು ನೋಡಿದರೆ ಮನಸ್ಸು ವ್ಯಾಕುಲಗೊಳ್ಳುವದು."

ಸಂಯುಕ್ತೆಯು ಹೀಗೆ ನುಡಿದ ಕೂಡಲೆ ಜಯಚಂದ್ರನಲ್ಲಿ ವಿವೇಕೋದಯವಾಗದೆ, ಅವನ ತಾಮಸವೃತ್ತಿಯು ಮತ್ತಷ್ಟು ಜಾಗ್ರತವಾಯಿತು. ನಿನ್ನೆ-ಮೊನ್ನೆ

ನವಳಾದ ಇವಳು ಅನುಭವಶಾಲಿಯಾದ ತನಗೆ ಬುದ್ಧಿ ಹೇಳತೊಡಗಿದ್ದರಿಂದ ಅವನು ರೇಗಿಗೆದ್ದನು. ಆಗ ಅವನು ಕಠೋರವಾಣಿಯಿಂದ:—"ಸಂಯುಕ್ತೇ, ನೀನು ನನಗೆ ಬುದ್ಧಿಗಲಿಸುವೆಯಾ? ಆ ನೀಚ ಪೃಥ್ವಿಯ ಸಮ್ಮುಖದಲ್ಲಿ ತಲೆಬಾಗಿ ನಡೆಯು ಬೇಕೆಂದು ನನಗೆ ಹೇಳುವೆಯಾ? ನನ್ನಿಂದ ಕಾಣಿಕೆಯನ್ನು ತೆಗೆದುಕೊಂಡು ಅಧಿ ರಾಜನೆನಿಸಿಕೊಳ್ಳಬೇಕೆಂದು ಹವಣಿಸುತ್ತಿರುವ ಆ ಹೆಮ್ಮೆಯಾವನೆದುರಿನಲ್ಲಿ ನಾನು ಬಾಗಲಾ! ನನಗಿಂತ ಚಿಕ್ಕವನ ಸ್ವಾಮಿತ್ವವನ್ನು ನಾನು ಒಪ್ಪಲಾ? ಆಗದು; ಈ ಮಾತು ಎಂದಿಗೂ ಆಗದು. ಪೃಥ್ವಿಯ ರಾಜ್ಯವು ಶಹಾಬುದ್ದೀನನ ವಶವಾದರೆ ಅದೊಂದು ಪುತ್ರೋತ್ಸವ ಸದೃಶವೆಂದು ಆನಂದಪಡುವೆನಲ್ಲದೆ, ಅವನ ಏಳ್ಗೆಗಾಗಿ ಯತ್ನಿಸುವದು ನನ್ನಿಂದ ಎಂದೂ ಆಗದು."

"ಮಹಾರಾಜರೇ, ನನ್ನ ಅಭಿಪ್ರಾಯವಾದರೂ ಹೀಗೆಯೇ ಇರುವದು. ಪೃಥ್ವೀರಾಜರು ತಮ್ಮನ್ನು ಸರಿಸಮಾನಸ್ಕಂಧರೆಂದು ತಿಳಿದುಕೊಳ್ಳುವವರೆಗೆ ಅವ ರೊಡನೆ ಅಸಹಕಾರದಿಂದ ನಡೆಯುವದೇ ಯೋಗ್ಯ."

ಜಯಚಂದ್ರನ ಮಾತಿಗೆ ಅವನ ಸೇನಾಪತಿಯಾದ ಕಹರಕಂಠೀರವನು ಈ ಬಗೆ ಯಾಗಿ ಅಭಿಪ್ರಾಯವಿತ್ತನು. ಅವರೀರ್ವರ ವಿಚಾರಗಳನ್ನು ಕೇಳಿ ಸಂಯುಕ್ತೆಯು ಮತ್ತಿಷ್ಟು ಕ್ಲೇಶಬಟ್ಟಳು. ಪರಕ್ಷಣವಲ್ಲಿ ವಿಲಕ್ಷಣ ಸಂತಾಪದಿಂದ ಉಗ್ರಳಾದಳು.

"ಅಂತೂ ಭಾರತೀಯರ ವಿನಾಶಕಾಲದ ದುಃಶ್ಚಿಹ್ನವು ತೋರತೊಡಗಿತು. ಅಸೂಯೆಯಿಂದ ಅಂತಃಕಲಹಕ್ಕೆ ಪ್ರೋತ್ಸಾಹನೆ ಕೊಟ್ಟು, ರಾಷ್ಟ್ರವನ್ನು ಮೃತ್ಯುಪಥ ಕ್ಕೀಡುಮಾಡುವ ಸಾಹಸವನ್ನು ನೀವು ಮಾಡತೊಡಗಿರುವಿರೆಂಬದು ಈಗ ನಿಚ್ಚಳ ವಾಗಿ ತಿಳಿದಂತಾಯಿತು! ಅಪ್ಪಾ, ನಿಮ್ಮಂತಹರ ನೀಚಕೃತ್ಯಗಳು ದೇಶಕ್ಕೆ ನಷ್ಟಚರ್ಯೆ ಯ ದಿನಗಳನ್ನು ತರುವ ಸಾಧನಗಳಾಗುವವೆಂಬದನ್ನು ಮರೆಯಬೇಡಿರಿ. ನಿಮ್ಮ ದುಷ್ಕೃತಿಗಳು ದೇಶಕ್ಕೆ ಅಪಾಯಕರವಾಗಿ ಪರಿಣಮಿಸಿದರೆ ನೀವು ಆಚಂದ್ರಾರ್ಕವಾಗಿ ಅಪಕೀರ್ತಿಗೆ ಭಾಗಿಗಳಾಗಬೇಕಾಗುವದು. ಭಾರತೀಯರ ಇತಿಹಾಸದಲ್ಲಿ ನಿಮ್ಮಂ ತಹ ದೇಶದ್ರೋಹಿಗಳ ಚಿತ್ರವು ಅಚ್ಚ ಕರಿಯ ಮಸಿಯಿಂದ ಬರೆಯಲ್ಪಡುವ ದೆಂಬ ಮಾತನ್ನು ಸಂಪೂರ್ಣವಾಗಿ ಲಕ್ಷ್ಯದಲ್ಲಿಟ್ಟುಕೊಂಡೇ ಕಾರ್ಯಮಾಡಿರೆಂಪ ರಾಯಿತು. ನೀವೇನು ಅಪ್ರಬುದ್ಧರಲ್ಲ; ಅಜ್ಞರಲ್ಲ. ದ್ವೇಷಾಸೂಯೆಗಳನ್ನು ಬದಿ ಗಿರಿಸಿದರೆ ನೀವು ಆದರ್ಶ ವೀರ ಕ್ಷತ್ರಿಯರೆಂಬ ಮಾತು ನನಗೆ ಗೊತ್ತಿದೆ. ವಿಚಾರ ದಿಂದ ಕಾರ್ಯ ಮಾಡಿ ಶ್ರೇಯೋಭಾಗಿಗಳಾಗಬೇಕೆಂದು ನಾನು ಬೇಡಿಕೊಳ್ಳುವೆನು" ಎಂದು ಸಂಯುಕ್ತೆಯು ತನ್ನ ಮನಸ್ಸಿನ ಉದ್ವೇಗವನ್ನು ನುಂಗಿಕೊಂಡು ಶಾಂತ ರೀತಿಯಿಂದ ಹೇಳಿದಳು.

ಮನಃಪೂರ್ವಕವಾಗಿ ಹೇಳಿದ ಸ್ವದೇಶಾಭಿಮಾನಪೂರಿತಳಾದ ಸಂಯುಕ್ತೆಯ ಮಾತಿನ ಪರಿಣಾಮವು ಜಯಚಂದ್ರನ ಮನಸ್ಸಿನ ಮೇಲೆ ಈಗ ಅಲ್ಪಮಟ್ಟಿಗೆ ಆಯಿತು. ಮಗಳ ಮಾತುಗಳು ಅವನ ಮನಸ್ಸಿಗೆ ಸರಿಯಾಗಿ ಕಾಣುತ್ತಿದ್ದರೂ, ಅವನು ಪೃಥ್ವೀರಾಜನ ವಿಷಯಕ್ಕೆ ದೀರ್ಘದ್ವೇಷವನ್ನು ತಳೆದದ್ದರಿಂದ ಒಮ್ಮೆಲೆ ಅವಳ ಮಾತಿಗೆ ಸಮ್ಮತಿ ಕೊಡಲಾರದವನಾಗಿದ್ದನು. ಅವಳನ್ನು ತಿರಸ್ಕರಿಸಿ ಮನಬಂದಂತೆ ನಡೆಯುವದಕ್ಕೂ ಅವನಿಗೆ ಧೈರ್ಯವಿಲ್ಲದಾಗಿತ್ತು. ಅವನು ಸ್ವಲ್ಪ ಹೊತ್ತಿನ ವರೆಗೆ ವಿಚಾರದಲ್ಲಿ ಹುಳುಗಿದ್ದನು. ಕೆಲ ವೇಳೆಯ ಮೇಲೆ ಅವನು ಏನೋ ನಿರ್ಧರಿಸಿ:—

"ಸಂಯುಕ್ತೆ, ನಿನ್ನ ಮಾತುಗಳು ನನಗೆ ತೀರ ಅಯೋಗ್ಯವಾಗಿ ಕಾಣುವದಿಲ್ಲ. ಪೃಥ್ವಿಯು ನನ್ನ ಕಡೆಗೆ ಮತ್ತೊಮ್ಮೆ ವಿನಂತಿಪತ್ರ ಕಳುಹಿಸಿದರೆ ಮಾತ್ರ ನಾನು ಅವನಿಗೆ ಸಹಾಯ ಮಾಡುವೆನು. ಅವನು ಹಾಗೆ ಮಾಡದಿದ್ದರೆ ಶಹಾಬುದ್ದೀನನ ವಿನಂತಿಯ ಮೇರೆಗೆ ನಾನು ಅವನನ್ನೇ ಕೂಡಿಕೊಳ್ಳಬೇಕಾಗುವದು."

"ಅದೇಕೆ? ಪೃಥ್ವೀರಾಜರಿಂದ ಬೇಡಿಕೆಯಾಗದಿದ್ದರೆ ತಟಸ್ಥರಾಗಿ ಕುಳಿತು ಕೊಳ್ಳುವದಕ್ಕೂ ನಿಮಗೆ ಬರುವಂತಿಲ್ಲವೇನು?" "ಇಲ್ಲ."

"ಪೃಥ್ವೀರಾಜರು ವಿನಂತಿ ಮಾಡಿಕೊಂಡರೆ ನೀವು ಅವರ ಸಹಾಯಕ್ಕೆ ಹೊರಡುವದು ನಿಶ್ಚಯವೆ?" "ನಿಶ್ಚಯ."

"ಈ ಮಾತು ಸತ್ಯವೇ?" "ಸತ್ಯ"

ಜಯಚಂದ್ರನ ಮಾತುಗಳನ್ನು ಕೇಳಿ ಸಂಯುಕ್ತೆಗೆ ಪರಮಾನಂದವಾಯಿತು. ಯುದ್ಧದ ಪ್ರಸಂಗದಲ್ಲಿ ಎಲ್ಲ ರಾಜರಿಗೆ ಹೇಳಿಕಳಿಸಿದಂತೆ ಪೃಥ್ವೀರಾಜನು ತನ್ನ ತಂದೆಗಾದರೂ ಸಹಾಯದ ಸಲುವಾಗಿ ಹೇಳಿಕಳಿಸುವನೆಂಬ ಮಾತು ಅವಳಿಗೆ ಗೊತ್ತಿತ್ತು. ಹೇಗಾದರೂ ತನ್ನ ತಂದೆಯಿಂದ ದೇಶದ್ರೋಹದ ಕೃತ್ಯ ಘಟಿಸುವ ಪ್ರಸಂಗ ತಪ್ಪಿತೆಂದು ಅವಳು ಸಂಭ್ರಮಗೊಂಡಳು. ವಾಚಕ ಮಹಾಶಯ! ಇಂಥವರೇ ಅಲ್ಲವೆ, ಆದರ್ಶ ಆರ್ಯಾಂಗನೆಯರು?

---

ಸಂಯುಕ್ತೆಯು ತನ್ನ ಬಾಲ್ಯಸಹಚರಿಯಾದ ಚಿತ್ರರೇಖೆಯೊಡನೆ ಉದ್ಯಾನದಲ್ಲಿ ಕುಳಿತಿದ್ದಳು. ಬಹಳ ದಿವಸಕ್ಕೆ ಆ ಮೈತ್ರಿಣಿಯರ ಭೆಟ್ಟಿಯಾದುದರಿಂದ ಇಬ್ಬರೂ ಸಂಭ್ರಮವುಳ್ಳವರಾಗಿದ್ದರು. ಚಿತ್ರರೇಖೆಯು ಗಂಧರ್ವ ಕನ್ನಿಕೆಯಾಗಿದ್ದರೂ ಗೃಹಿಣೀ ಪದ ಪ್ರೇಮಾಂಕುರ ಸ್ವೀಕರಿಸಿ ರಾಜ್ಞಿಯಾದ್ದರಿಂದ, ಅವಳ ಸುಕೃತಿಯನ್ನು ಸಂಯುಕ್ತೆಯು ಯಥೇಷ್ಟವಾಗಿ ಹೊಗಳಿದಳು. ಚಿತ್ರರೇಖೆಯು ವೇಶ್ಯೆಯರ ಜಾತಿಯವಳಾಗಿದ್ದರೂ ಅವಳ ಸದ್ಗುಣಗಳಿಗೆ ಮನಮೆಚ್ಚಿದವಳಾದ ಸಂಯುಕ್ತೆಯು ಅವಳೆದುರಿನಲ್ಲಿ ಯಾವದನ್ನೂ ಬಚ್ಚಿಡುತ್ತಿ

ದ್ದಿಲ್ಲ. ಪರಸ್ಪರರು ನಿರ್ಮಲ ಮೈತ್ರಿಯುಳ್ಳವರಾಗಿದ್ದರು. ಚಿತ್ರರೇಖೆಯು ರಾಜ್ಞೀಪದ ಹೊಂದಿದ ಕಥೆಯನ್ನು ಕೇಳಬೇಕೆಂದು ಇವಳು ಉತ್ಸುಕತೆಯುಳ್ಳವಳಾದ್ದರಿಂದ ಚಿತ್ರರೇಖೆಯು ಆ ಕಥೆಯನ್ನು ಹೇಳತೊಡಗಿದಳು:—

ದೇವೀ, ತೀರ್ಥಯಾತ್ರೆಗೆಂದು ನನ್ನ ತಂದೆ-ತಾಯಿಗಳೂ ನಾನೂ ಹೊರಟ ಸಂಗತಿಯು ನಿಮಗೆ ಗೊತ್ತೇ ಇರುವದಲ್ಲವೆ? ನಾವು ಇಲ್ಲಿಂದ ಹೊರಟು ಕಾಶೀ ಕ್ಷೇತ್ರದ ದಾರಿಯನ್ನು ಹಿಡಿದೆವು. ಎರಡು ದಿನಗಳ ಮಾರ್ಗಕ್ರಮಣವು ಸುಖರೂಪವಾಯಿತು. ಮೂರನೆಯ ದಿವಸ ಒಬ್ಬ ಸುಲಿಗೆಗಾರನು ನಮಗೆ ಗಂಟುಬಿದ್ದನು. ಅವನು ಪೃಥ್ವೀರಾಜರ ಪಕ್ಷದವನು. ಅವನ ಹೆಸರು ಮನ್ನಾ ಡಾಕು. ಅವನು ನೀಚತನದಿಂದ ತನ್ನ ತಂದೆ-ತಾಯಿಗಳನ್ನು ಕೊಂದುಹಾಕಿದನು. ಅಷ್ಟರಲ್ಲಿ ಪೃಥ್ವೀರಾಜರ ಸರದಾರನೊಬ್ಬನು ಅಲ್ಲಿಗೆ ಬಂದು ನನ್ನನ್ನು ಬಂಧಮುಕ್ತಳನ್ನಾಗ ಮಾಡಿ ಬಟಿಂಡಾಗಡಕ್ಕೆ ಒಯ್ದನು. ಅಲ್ಲಿ ನನಗೆ ರಾಜ್ಞೀಪದವು ದೊರೆಯಿತು. ದೇವಿಯವರೇ, ಪೂರ್ವಸುಕೃತಿಯಿಂದಲೇ ನನಗೆ ಭಾಗ್ಯೋದಯವಾಯಿತು; ಆದರೆ ಮನ್ನಾ ಡಾಕುವು ನನ್ನ ತಾಯಿಯನ್ನೂ, ತಂದೆಯವರಾದ ಚಂಪನಲಾಲರನ್ನೂ ಕೊಂದ ದುಃಖವು ಮಾತ್ರ ಮರೆಯಲೊಲ್ಲದು."

"ಮನ್ನಾ ಡಾಕೂನ ಕಥೆಯನ್ನು ಕೇಳಿರುವೆನು. ಅವನು ಇಂತಹ ಕೊಲೆಗಡಕನೆಂದು ನಾನು ಭಾವಿಸಿರಲಿಲ್ಲ."

"ಅವನು ದರಿದ್ರಾವಸ್ಥೆಯಲ್ಲಿದ್ದ ನನ್ನ ತಂದೆ-ತಾಯಿಗಳ ಕೊಲೆ ಮಾಡುವದಕ್ಕೆ ಕಾರಣವಿದ್ದಿಲ್ಲ; ನನ್ನ ತಂದೆಯು ಜಯಚಂದ್ರ ಮಹಾರಾಜರ ಪಕ್ಷದವನೆಂದು ತಿಳಿದದ್ದರಿಂದ ಅವನು ಹೀಗೆ ಕ್ರೂರಾಚರಣೆಯನ್ನಾಚರಿಸಿದನು."

"ಜಯಚಂದ್ರ ಮಹಾರಾಜರು ಅವರಿಗೇನು ಕೆಡಕು ಮಾಡಿರುವರು?"

"ಅವರು ಪೃಥ್ವೀರಾಜರ ವೈರಬಳೆಯಿಸಿರುವದಿಷ್ಟೇ ಕಾರಣದಿಂದ ಮನ್ನಾನು ಮಹಾರಾಜರ ಮೇಲೆ ಸಿಟ್ಟಾಗಿರುವನು."

"ಇದೊಂದು ಸ್ವಾಮಿನಿಷ್ಠೆಯ ಮಾದರಿ!" ಎಂದು ಸಂಯುಕ್ತೆಯು ನುಡಿದು: "ನಿನ್ನ ಪತಿದೇವನು ಕೇವಲ ನನ್ನ ಭೆಟ್ಟಿಗಾಗಿಯೇ ನಿನ್ನನ್ನಿಲ್ಲಿಗೆ ಕಳಿಸಿರುವನೇ?"

"ದೇವಿಯರೇ, ತಮ್ಮ ದರ್ಶನಲಾಲಸೆಯು ಬಹು ದಿನಗಳಿಂದ ನನ್ನಲ್ಲಿ ಉದಯಿಸಿದ್ದರೂ, ನಾನು ಇಷ್ಟು ಬೇಗನೆ ಇಲ್ಲಿಗೆ ಬರುತ್ತಿರಲಿಲ್ಲ. ಶಹಾಬುದ್ದೀನ ಘೋರಿಯು ನನ್ನ ಪ್ರಾಪ್ತಿಗಾಗಿ ಬಟಿಂಡಾಗಡವನ್ನು ಮುತ್ತತಕ್ಕವನಿರುವನಂತೆ. ಕೇವಲ ಶೀಲರಕ್ಷಣೆಗಾಗಿ ಅವರು ನನ್ನನ್ನು ಇಲ್ಲಿಗೆ ಕಳಿಸಿರುವರು" ಎಂದು ಚಿತ್ರರೇಖೆಯು ನುಡಿದು, ಬುದ್ಧಿಪೂರ್ವಕವಾಗಿ:—

"ಭಾವೀಧರ್ಮಸಂಗ್ರಾಮದಲ್ಲಿ ಎಲ್ಲ ಕ್ಷತ್ರಿಯ ದೊರೆಗಳು ಐಕ್ಯದಿಂದ ಶಾದಿ ಘೋರಿಯನ್ನು ಹಿಂದಕ್ಕಟ್ಟಬೇಕೆಂದು ನಿರ್ಧರಿಸಿರುವರು. ಈ ಕಾರ್ಯದಲ್ಲಿ ಜಯ ಚಂದ್ರ ಮಹಾರಾಜರು ಭಾಗತೆಗೆದುಕೊಳ್ಳಬಾರದೇಕೆ? ಸಂಯುಕ್ತಾದೇವಿಯವರೆ, ಗೃಹಕಲಹವನ್ನು ಇಂತಹ ಪ್ರಸಂಗದಲ್ಲಿ ಬದಿಗಿಡದಿದ್ದರೆ ಹೇಗೆ? ಈ ವಿಷಯದಲ್ಲಿ ಮಹಾರಾಜರಿಗೆ ಯೋಗ್ಯ ಮಂತ್ರಾಲೋಚಕರು ಕೂಡಿಲ್ಲವೆಂಬಂತೆ ಕಾಣುವದು. ಅವರು ಘೋರಿಗೆ ಸಹಾಯ ಮಾಡಬೇಕೆಂಬ ಇಚ್ಛೆಯುಳ್ಳವರಾಗಿರುವರೆಂದು ಕೇಳುತ್ತೇನೆ."

"ಚಿತ್ರರೇಖೆ, ನಿನ್ನ ಮಾತು ನಿಜವಿರುವದು. ತಂದೆಯವರ ಈ ವರ್ತನ ವನ್ನು ನಾನು ಸಂಪೂರ್ಣ ನಿಷೇಧಿಸುತ್ತಿರುವೆನು. ಪರಕೀಯರು ಸಾಗಿ ಬಂದಾಗ ಒಳಜಗಳವನ್ನು ಬದಿಗಿರಿಸುವದು ನಿಜವಾದ ಮುತ್ಸದ್ಧಿತನದ ಮಾತಾಗಿರುವದು. ಪ್ರಸಂಗ ನೋಡಿಕೊಂಡು ಒಮ್ಮೆ ನನ್ನ ತಂದೆಯವರ ಮನಸ್ಸನ್ನು ತಿರುಗಿಸಲಿಕ್ಕೆ ಪ್ರಯತ್ನಿಸುವೆನು."

"ದೇವಿಯವರೇ, ಜಯಚಂದ್ರ ಮಹಾರಾಜರು ಪೃಥ್ವೀರಾಜರಲ್ಲಿ ವೈಮನಸ್ಸು ಳ್ಳವರಾಗಿರುವದರಿಂದ ನಿಮ್ಮ ಮಾತಿನಂತೆ ನಡೆಯುವರೆಂದು ಹೇಗೆ ಹೇಳಬೇಕು?"

"ಹೇಗಾದರೂ ಮಾಡಿ ನಾನು ನನ್ನ ತಂದೆಯವರ ಮನಸ್ಸು ತಿರುಗಿಸುವೆನು."

ಜಯಚಂದ್ರ ಮಹಾರಾಜರು ಅಸೂಯಾಪರರಿರುವದರಿಂದ ಪೃಥ್ವಿರಾಜರ ಸದ್ಗುಣಗಳ ಗಂಧವು ಸಹ ಅವರನ್ನು ಸೋಂಕಲೊಲ್ಲದು. ಆರ್ಯಾವರ್ತದ ಸಮ್ರಾ ಟರಾದ ಅವರು ಅತ್ಯಂತ ವಿಕ್ರಮಶಾಲಿಗಳೂ, ಪ್ರಜಾನುರಾಗವುಳ್ಳವರೂ, ಸೌಜನ್ಯದ ನಿಧಿಯೂ ಆಗಿರುವರು. ದೇವೀ, ನಾನು ಅವರ ಸದ್ಗುಣಗಳನ್ನು ಎಷ್ಟು ವರ್ಣಿಸಿ ದರೂ ಕಡಿಮೆಯಾಗಿರುವದು. ಅಲ್ಪ ವಯಸ್ಕರಾದ ಅವರು ಈ ಬಗೆಯ ಗುಣ ಸಿಧಿಗಳಿರುವದನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯತೋರಿಸುವಂತಿದೆ. ಅವ ರಿಗೆ ಸಾಮ್ರಾಜ್ಯ ಪದವಿಯ ಗರ್ವವಿಲ್ಲ; ಅವರನ್ನು ನೋಡಿದರೆ ಎಂತಹರಲ್ಲಾದರೂ ಪೂಜ್ಯಬುದ್ಧಿಯು ಹುಟ್ಟುವದು. ಆರ್ಯಾವರ್ತವು ಅತ್ಯಂತ ಪುಣ್ಯಶಾಲಿಯಿದ್ದು ದರಿಂದಲೆ ಅದಕ್ಕೆ ಇಂತಹ ನೃಪಕುಲತಿಲಕರು ಲಭಿಸಿರುವರು. ಸಂಯುಕ್ತಾದೇವಿ ಯವರೇ, ನಿಮಗೆ ಆ ಮಹಾನುಭಾವರ ಪರಿಚಯವಿಲ್ಲದ್ದರಿಂದ ನನ್ನ ಮಾತಿನಲ್ಲಿ ಹುಟ್ಟತಕ್ಕಷ್ಟು ವಿಶ್ವಾಸವು ಹುಟ್ಟಲಿಕ್ಕಿಲ್ಲ. ಪ್ರಸಂಗವಿಶೇಷದಲ್ಲಿ ನಿಮಗೆ ಅವರ ಪರಿ ಚಯವಾದರೆ ನನ್ನ ಮಾತಿನ ಸತ್ಯತೆಯು ಕಂಡು ಬರುವದು. ಅವರು ನಿಮ್ಮ ಆಪ್ತಕೋಟಿಯವರಾಗಿದ್ದರೂ, ಪರಸ್ಪರರಲ್ಲಿಯ ದೀರ್ಘದ್ವೇಷದ ಮೂಲಕ ನಿಮಗೆ ಅವರ ದರ್ಶನ ಸಹ ಆಗದೆ ಹೋಗಿರುವದು."

"ಚಿತ್ರರೇಖೆ, ಪೃಥ್ವೀರಾಜರು ಇಂತಹ ಧೀರೋದಾತ್ತರಿರುವರೇ?"

"ನನ್ನ ಮಾತಿನಲ್ಲಿ ಲವಲೇಶವಾದರೂ ಅಸತ್ಯವಿಲ್ಲ."

ಸಂಯುಕ್ತೆಯು ಅತ್ಯಂತ ಗುಣಗ್ರಾಹಿಯಾಗಿದ್ದಳು. ಸದ್ಗುಣಿಗಳಾದವರನ್ನು ಅವಳು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಳು. ಚಿತ್ರರೇಖೆಯು ವೇಶ್ಯಾಜಾತಿಯ ಕನ್ನಿಕೆಯಿದ್ದರೂ ಗುಣಯುತಳಿದ್ದುದರಿಂದ ಅವಳನ್ನು ತನ್ನ ಸಖಿಯನ್ನಾಗಿ ಮಾಡಿಕೊಂಡಿದ್ದಳು. ರಾಜ್ಞೀಪದದ ವರೆಗೆ ದೊಡ್ಡಿಸ್ತಿಕೆಯನ್ನು ಅವಳು ಪಡೆಯಬೇಕಾದರೆ ಸಂಯುಕ್ತೆಯೇ ಮುಖ್ಯ ಕಾರಣಳಾಗಿದ್ದಳು. ತಾನು ಸಂಯುಕ್ತಾದೇವಿಯ ಗೆಳತಿಯಾಗಿರುವ ಸಂಗತಿಯನ್ನು ಅವಳು ಅಮರಸಿಂಹನಿಗೆ ತಿಳಿಸಿದ್ದರಿಂದ, ಅವನು ಅವಳನ್ನು ರಾಣೀವಾಸದಲ್ಲಿ ಸೇರಿಸಿಕೊಂಡನು. ಅವಳು ಸ್ವಭಾವತಃ ಸದ್ಗುಣಿಯಿದ್ದದರಿಂದ ತನ್ನ ಗುಣಗಳ ಪ್ರಭಾವದಿಂದ ಅಮರಸಿಂಹನ ಪ್ರೀತಿಗೆ ಪೂರ್ಣವಾಗಿ ಪಾತ್ರಳಾಗಿದ್ದಳು. ಇಂತಹ ಗುಣನಿಧಿಯಾದ ಚಿತ್ರರೇಖೆಯ ಮಾತುಗಳ ವಿಷಯಕ್ಕೆ ಸಂಯುಕ್ತೆಯಲ್ಲಿ ಅವಿಶ್ವಾಸ ಹುಟ್ಟುವ ಕಾರಣವೇ ಇದ್ದಿಲ್ಲ. ಇದಲ್ಲದೆ ಅವಳು ಪೃಥ್ವೀರಾಜನ ಗುಣಗಳನ್ನು ಕರ್ಣೋಪಕರ್ಣವಾಗಿ ಕೇಳಿದವಳಾಗಿದ್ದಳು. ಚಿತ್ರರೇಖೆಯು ಅವುಗಳನ್ನು ಒಳಿತಾಗಿ ವರ್ಣಿಸಿದ್ದರಿಂದ, ಆ ನೃಪತುಂಗನನ್ನೊಮ್ಮೆ ಕಣ್ಮುಟ್ಟ ನೋಡಬೇಕೆಂಬ ಇಚ್ಛೆಯೂ ಅವಳಲ್ಲಿ ಹುಟ್ಟಿತು. ಆಗ ಅವಳು ಚಿತ್ರರೇಖೆಯನ್ನು ಕುರಿತು ಕುತೂಹಲದಿಂದ:—

"ಗೆಳತೀ, ಆ ಮಹಾನುಭಾವರ ದರ್ಶನವು ಹೇಗಾದೀತವ್ವಾ?"

"ದೇವೀ, ಅವರೀಗ ಸಂಗ್ರಾಮ ಸಿದ್ಧತೆಯ ಗೊಂದಲದಲ್ಲಿರುವರು. ಯುದ್ಧವು ಮುಗಿದು, ಶಾಂತವಾದ ಮೇಲೆಯೇ ಅವರ ದರ್ಶನವಾಗಬಹುದು."

ಪೃಥ್ವೀರಾಜರಂತಹ ಸದಸದ್ವಿವೇಕಿಗಳೊಡನೆ ತನ್ನ ತಂದೆಯು ನಿಷ್ಕಾರಣವಾಗಿ ದ್ವೇಷಬಳೆಯಿಸಿರುವನೆಂದು ಸಂಯುಕ್ತೆಯು ಅವನನ್ನು ಮನಸಾ ನಿಂದಿಸಿದಳು. ಭಾವೀಯುದ್ಧದಲ್ಲಿ ಅವನು ಪೃಥ್ವೀರಾಜರ ಪ್ರತಿಸ್ಪರ್ಧಿಯಾಗಿ ನಿಂತು, ಶಹಾಬುದ್ದೀನನಿಗೆ ಸಹಾಯ ಮಾಡುವವನಿರುವನೆಂಬ ಸಂಗತಿಯು ಮನಸ್ಸಿನಲ್ಲಿ ಬಂದ ಕೂಡಲೆ ಅವಳು ತಂದೆಯ ವಿಷಯಕ್ಕೆ ತಿರಸ್ಕಾರ ಬುದ್ಧಿಯನ್ನು ತಳೆದಳು. ಮನಮುಟ್ಟಿ ಯತ್ನಿಸಿ ತಂದೆಯ ಮನಸ್ಸನ್ನು ತಿರುಗಿಸಬೇಕೆಂದು ಅವಳು ನಿರ್ಧರಿಸಿದಳು. ಪರಕೀಯನಾದ ಘೋರಿಗೆ ಸಹಾಯಮಾಡಿ, ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಂಡಂತೆ ಮಾಡುವ ಕೃತಿಯು ಅವಳಿಗೆ ಸರಿಬರಲಿಲ್ಲ.

ಚಿತ್ರರೇಖೆಯು ಸಂಯುಕ್ತೆಯ ಮುಂದೆ ಪೃಥ್ವೀರಾಜನ ಗುಣವರ್ಣನೆ ಮಾಡಿದಾಗಿನಿಂದ ಅವಳ ಮನಸ್ಸು ಒಂದು ವಿಧವಾಗಿತ್ತು. ಅವಳ ಹೃದಯಭೂಮಿಯಲ್ಲಿ ಒಂದು ಬಗೆಯ ವಿಕಾರವು ಅಂಕುರಿಸಿ ಮನಸ್ಸನ್ನು ಚಂಚಲಗೊಳಿಸಿತ್ತು. ಮನದ

ವಿಚಿತ್ರ ಸ್ಥಿತಿಯನ್ನು ತನ್ನ ಗೆಳತಿಯ*ಮುಂದೆ ಹೇಳುವದಕ್ಕೆ ಅವಳು ಅನುಮಾನಿಸ ತೊಡಗಿದ್ದಳು. ಅವಳು ಎಷ್ಟು ಬಗೆಯಿಂದ ಮನಸ್ಸು ಬಿಗಿ ಹಿಡಿದರೂ ಅದು ಅಸು ಗೊಳ್ಳದಾಗಿತ್ತು.

"ಚಿತ್ರರೇಖೆ; ಪೃಥ್ವೀರಾಜರು ಅವಿವಾಹಿತರಿರುವರೇನು?" ಎಂದು ಅಂಜು ತ್ತಂಜುತ್ತ ಸಂಯುಕ್ತೆಯು ಕೇಳಿ, ಅವಳ ಮುಖದಿಂದ ಏನು ಹೊರಬೀಳುವದೆಂಬ ದನ್ನು ಉತ್ಕಂಠೆಯಿಂದ ನಿರೀಕ್ಷಿಸತೊಡಗಿದಳು.

ಸಂಯುಕ್ತೆಯು ಅವಿವಾಹಿತಳಿದ್ದಳು; ಪ್ರಾಯಪ್ರದೇಶದಲ್ಲಿ ಪದಾರ್ಪಣ ಮಾಡಿದವಳಿದ್ದಳು; ಮೇಲಾದ ರೂಪವತಿಯಾಗಿದ್ದಳು. ಷೋಡಶವರ್ಷದ ಪ್ರಾಯ ದವಳಾದ ಅವಳು ಪೃಥ್ವೀರಾಜನ ಗುಣಗೌರವವನ್ನೂ ರೂಪವರ್ಣನೆಯನ್ನೂ ಕೇಳಿ, ಅವನು ವಿವಾಹಿತನೋ ಅವಿವಾಹಿತನೋ ಎಂಬದನ್ನು ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸಿದರೆ ತಪ್ಪೇನು?

ಚಿತ್ರರೇಖೆಯು ಸಂಯುಕ್ತೆಯ ಮನೋಗತವನ್ನು ತಟ್ಟನೆ ಕಂಡುಹಿಡಿದು, ಅವಳ ಆತುರಪೂರ್ಣವಾದ ಮುಖವನ್ನು ಕಣ್ಣುತುಂಬ ನೋಡುತ್ತ ಮುಗುಳುನಗೆ ಯಿಂದ ನಗತೊಡಗಿದಳು ಇವಳ ಹೃದಯದಲ್ಲಿ ಪೃಥ್ವೀರಾಜನ ಮೂರ್ತಿಯು ನೆಲೆಗೊಂಡಿರುವದೆಂದು ಅವಳು ಭಾವಿಸಿದಳು.

"ದೇವಿ, ನಾನು ಅದನ್ನೇನು ಬಲ್ಲೆ? ಅವರೊಡನೆ ಶರೀರಸಂಬಂಧ ಮಾಡುವ ಪ್ರಸಂಗ ಯಾರಿಗಿರುವದೋ ಅವರನ್ನು ಕೇಳಿದರೆ ಇಂತಹ ವಿಷಯದ ಬಗ್ಗೆ ಗೊತ್ತು ವಳಿಯಾಗಬಹುದು" ಎಂದು ಚಿತ್ರರೇಖೆಯು ಬುದ್ಧಿಪೂರ್ವಕವಾಗಿ ನುಡಿದು:—
"ಯಾಕೆ? ದೇವಿಯವರೇ, ಅವರ ವಿವಾಹದ ವಿಷಯವಾಗಿ ವಿಚಾರಿಸುವದೇಕೆ?"

ಸಂಯುಕ್ತೆಯು ತಲೆಬಾಗಿಸಿದಳು; ಮುಖವು ಆರಕ್ತವಾಯಿತು. ನಾಚಿಕೆ ಯಿಂದ ಅದು ಮತ್ತಿಷ್ಟು ಮನೋಹರಗೊಂಡಿತು. ಯಾವದೋ ಅಜ್ಞಾತ ವಿಚಾರ ದಿಂದ ಅವಳ ಮುಖಕಮಲವು ಪ್ರಫುಲ್ಲಿತವಾಯಿತು. ಚಂದ್ರಕಾಂತಿಯುತವಾದ ಆ ವದನವು ದ್ರವಿಸಿತು. ಇಷ್ಟೆಲ್ಲ ಚಿಹ್ನಗಳು ಏಕಕಾಲಕ್ಕೆ ಕಂಡ ಮೇಲೆ ಚಿತ್ರರೇಖೆ ಯು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದ ತರ್ಕವು ನಿಜವಾಗದೇನು ಮಾಡೀತು?

"ದೇವಿಯವರೇ, ಪೃಥ್ವೀರಾಜರು ವಿವಾಹಿತರಿದ್ದರೂ ನೀವು ಗಾಬರಿಗೊಳ್ಳುವ ಕಾರಣವಿಲ್ಲ."

ಚಿತ್ರರೇಖೆಯ ಈ ಮಾತುಗಳನ್ನು ಕೇಳಿ ಸಂಯುಕ್ತೆಯು ಬೆಚ್ಚಿಬಿದ್ದಳು. ಅವಳು ತನ್ನ ಮನಸ್ಸಿನೊಳಗಿನ ಗುಪ್ತವಿಚಾರಗಳನ್ನು ಕಂಡುಹಿಡಿದಳೆಂದು ಮತ್ತಿಷ್ಟು ಲಜ್ಜೆಗೊಂಡಳು. ಆಗ ಅವಳು ಸಿಟ್ಟಿನ ಆವಿರ್ಭಾವವನ್ನು ತಾಳಿ:—

“ಚಿತ್ರರೇಖೇ, ಇದೇನು ಅಸತ್ಯ ಮಾತನಾಡುವೆಯೋ? ಅವರ ವಿವಾಹವಾಗಿದ್ದರೆ ನಾನೇಕೆ ಗಾಬರಿಗೊಳ್ಳಬೇಕೇ?”

“ದೇವೀ, ಕ್ಷಮಿಸಿರಿ. ಗಾಬರಿಗೊಳ್ಳುವದಕ್ಕೆ ಸಕಾರಣ ಪ್ರಮಾಣಗಳುಂಟು ನಾಮವನ್ನು ಗುಪ್ತವಿರಿಸಿ, ಅವರು-ಇವರೆಂದು ಮಾತನಾಡುವ ನಿಮ್ಮ ಮುಖವು ಹಾಗೆ ನನಗೆ ಹೇಳಿದ್ದರಿಂದಲೇ ನಾನು ಮಾತನಾಡಿದೆನು” ಎಂದು ನುಡಿದು, ಚಿತ್ರರೇಖೆಯು ಗಹಗಹಿಸಿ ನಗುತ್ತ:—“ನೀವು ‘ಅವರ-ಇವರ’ ಲಗ್ನ ಸಮಾರಂಭವನ್ನು ಜರುಗಿಸಬೇಕಾಗಿರುವದೇನು? ಅವರಿಗೆ ಅನುರೂಪ ಕನ್ಯೆಯನ್ನೆಲ್ಲಿ ನೋಡಿರುವಿರಿ? ನೀವು ನೋಡಿರದಿದ್ದರೆ ನಾನು ಮಾತ್ರ ನೋಡಿರುವೆನು.”

“ನಿನ್ನ ಮಾತಿನ ಮರ್ಮವೇ ತಿಳಿಯದವ್ವಾ! ಅವರಿಗೆ ಅನುರೂಪಳಾದ ಕನ್ಯೆಯನ್ನೆಲ್ಲಿ ನೋಡಿರುವೆ?”

“ಇಲ್ಲಿಯೇ-ಇಲ್ಲಿಯೇ; ಇದೇ ಊರಲ್ಲಿ! ಇದೇ ಉದ್ಯಾನದಲ್ಲಿ!”

ಸಂಯುಕ್ತೆಯು ಮತ್ತೆ ಮುಖವನ್ನು ಬಾಗಿಸಿದಳು. ತನ್ನ ಮನಸ್ಸಿನ ಗುಟ್ಟನ್ನು ಇವಳು ಕಂಡುಹಿಡಿದಳೆಂದು ಸ್ವಲ್ಪ ಬೆದರಿದಳು.

“ಸಖೀ, ನೀನು ಬಹು ಚಾಣಾಕ್ಷಳಿರುವೆ. ನನ್ನ ಹೃದಯಮಂದಿರದಲ್ಲಿ ಪ್ರಸ್ಥಾಪಿತವಾದ ಮೂರ್ತಿಯನ್ನು ನೀನು ನಿಜವಾಗಿ ಕಂಡು ಹಿಡಿದ ಮೇಲೆ ನಾನು ಇನ್ನೇಕೆ ಬಚ್ಚಿಡಲಿ? ನನಗೆ ಅವರ ದರ್ಶನವು ಬೇಗನೆ ಆಗಬಹುದೇ?”

“ದೇವಿ, ಚಿಂತಿಸಬೇಡಿರಿ. ನೀವು ಯೋಗ್ಯನಾದ ನರಕೇಸರಿಯಲ್ಲಿ ಪ್ರೇಮವಿಟ್ಟದ್ದನ್ನು ನೋಡಿ ಆನಂದವಾಯಿತು. ನಿಮಗೆ ನಿಮ್ಮ ಹೃದಯ ದೇವತೆಯ ದರ್ಶನವು ಬೇಗನೆ ಆಗುವದು. ಸಂಯುಕ್ತಾದೇವಿಯವರೇ, ನಿಮ್ಮ ಫಲವತ್ತಾದ ಹೃದಯ ಪ್ರದೇಶದಲ್ಲಿದ್ದ ಪ್ರೇಮಾಂಕುರವು ಬೇಗನೆ ಬೆಳೆದು, ಮಧುರತರ ಫಲವನ್ನೀಯುವ ದಿವಸಗಳನ್ನು ನಾನು ಅತ್ಯಂತ ಆತುರದಿಂದ ನೋಡುತ್ತಲಿರುವೆನು” ಎಂದು ಚಿತ್ರರೇಖೆಯು ಮನಃಪೂರ್ವಕ ನುಡಿದಳು.

---

ಜಯಚಂದ್ರನು ಓಲಗದಲ್ಲಿ ಕುಳಿತಿದ್ದನು. ಅವನ ಮಂತ್ರಿಯಾದ ವಿಜಯಸಿಂಹನೂ ಸೇನಾಪತಿಯಾದ ಕಹರ ಕಂಠೀರವನೂ ಇನ್ನುಳಿದ ಸರದಾರ-ಸಾಮಂತರೂ ತಮ್ಮ ತಮ್ಮ ಆಸನಗಳಲ್ಲಿ ಮಂಡಿಸಿದ್ದರು. ಭಾವೀ ಸಂಗ್ರಾಮದಲ್ಲಿ ಪೃಥ್ವೀರಾಜನಿಗೆ ನೆರವಾಗಬೇಕೋ, ಶಹಾಬುದ್ದೀನನಿಗೆ ಸಹಾಯ ಮಾಡಬೇಕೋ ಎಂಬ ಬಗ್ಗೆ ಚರ್ಚೆ ನಡೆದಿತ್ತು. ಉತ್ತರ ಭಾರತದ ಎಲ್ಲ ಕ್ಷತ್ರಿಯ ನರೇಶರೂ ಪೃಥ್ವೀರಾಜನಿಗೇ ಸಹಾಯ ಮಾಡಬೇಕೆಂದು ನಿರ್ಧರಿಸಿದ್ದರಿಂದ, ತಾನೊಬ್ಬನೇ ಘೋರಿಗೆ ನೆರವಾದರೆ, ಧರ್ಮ

ತಿರೋರಿಯ ಕಾಳಗ

ದ್ರೋಹ-ದೇಶದ್ರೋಹ ಮಾಡಿದ ಬಗ್ಗೆ ಸ್ವಜನರಲ್ಲಿ ನಗೆಗೀಡಾಗಬೇಕಾಗುವದೆಂದೂ, ಆರ್ಯಾವರ್ತದ ರಾಜರೆಲ್ಲರೂ ತನ್ನ ಮೇಲೆ ಸಂತಪ್ತರಾಗುವರೆಂದೂ ಜಯಚಂದ್ರನು ಅಧೀರಮನಸ್ಕನಾಗಿದ್ದನು. ಅವನ ಮನಸ್ಸು ಹೀಗೆ ಅಧೀರತೆಯನ್ನು ಹೊಂದುವದಕ್ಕೆ ಸಂಯುಕ್ತೆಯೂ ಕಾರಣಳಾಗಿದ್ದಳು.

ಜಯಚಂದ್ರನು ಯಾವದನ್ನೂ ದೃಢವಾಗಿ ಗೊತ್ತುಪಡಿಸಲಾರದೆ ಚಂಚಲ ಮನಸ್ಕನಾಗಿ ಕುಳಿತಿದ್ದನು. ಆಗ ಅಬೂಗಡದ ಮಂಡಲೇಶ್ವರನ ಪುತ್ರನಾದ ಜೈತಸಿಂಹನು ಅವನ ಓಲಗಕ್ಕೆ ಬಂದು ನಮಸ್ಕರಿಸಿ, ಪೃಥ್ವೀರಾಜನ ಮುದ್ರೆಯ ಪತ್ರವನ್ನು ಅವನ ಕೈಯಲ್ಲಿ ಕೊಟ್ಟು:-" ಜಯಚಂದ್ರ ಮಹಾರಾಜರೇ, ಭಾರತ ಸಮ್ರಾಟರಾದ ಪೃಥ್ವೀರಾಜ ಮಹಾರಾಜರು ತಮ್ಮ ಕಡೆಗೆ ಈ ವಿನಂತಿ ಪತ್ರಿಕೆ ಮುಟ್ಟಿಸುವದಕ್ಕೆಂದು ನನ್ನನ್ನು ಬುದ್ಧಿಪೂರ್ವಕವಾಗಿ ಕಳಿಸಿರುವರು."

ಭಾರತಸಮ್ರಾಟ್ ಪೃಥ್ವೀರಾಜ ಮಹಾರಾಜರೆಂದು ಜೈತಸಿಂಹನು ನುಡಿದದ್ದರಿಂದ ಜಯಚಂದ್ರನ ಮನಸ್ಸು ವ್ಯಗ್ರವಾದರೂ, ವಿನಂತಿಪತ್ರಿಕೆ ಕಳಿಸಿರುವರೆಂಬ ಮಾತಿನಿಂದ ಅವನು ಸಂತೋಷಗೊಂಡವನಾದನು. ಆಗ ಅವನು ನಸುನಗುತ್ತ:— "ಏನು? ನಿಮ್ಮ ಸಮ್ರಾಟರು ನನ್ನ ಕಡೆಗೆ ವಿನಂತಿಪತ್ರಿಕೆ ಕಳಿಸಿರುವರೆ? ನನ್ನ ಬಳಿಯಲ್ಲಿ ಅದೇತರ ಬಗ್ಗೆ ವಿನಂತಿಮಾಡಿಕೊಂಡಿರುವರು?"

" ಶಹಾಬುದ್ದೀನ ಘೋರಿಯು ದಂಡೆತ್ತಿ ಬಂದಿರುವನು. ದುರಾಕಾಂಕ್ಷೆಯನ್ನು ತಾಳಿದ ಅವನನ್ನು ಹೊಡೆದಟ್ಟದಿದ್ದರೆ ಭಾರತದಲ್ಲಿಯ ಒಂದೊಂದೇ ಹಿಂದೂ ರಾಜ್ಯಗಳು ಅವನ ಸ್ವಾಧೀನವಾಗದೆ ಇರಲಾರವು. ಶಹಾಬುದ್ದೀನನೊಡನೆ ನೆರವೇರಿಸಬೇಕಾಗಿದ್ದ ಧರ್ಮಯುದ್ಧದಲ್ಲಿ ಎಲ್ಲ ಕ್ಷತ್ರಿಯ ದೊರೆಗಳೂ ಒಕ್ಕಟ್ಟಿನಿಂದ ಮಹಾರಾಜರನ್ನು ಕೂಡಿರುವರು. ನೀವಾದರೂ ಕಾಯಾ-ವಾಚಾ-ಮನಸ್ಸಿನಿಂದ ಅವರಗೆ ನೆರವಾಗಬೇಕೆಂದು ಬೇಡಿಕೊಳ್ಳುವೆನು. ಮಹಾರಾಜರ ವಿನಂತಿಪತ್ರವಾದರೂ ಇದೇ ಆಶಯುದ್ದಿರುವದು."

ಜಯಚಂದ್ರನು ಆ ಪತ್ರವನ್ನೋದತೊಡಗಿದನು:—

" ಶ್ರೀಯುತ ಜಯಚಂದ್ರಮಹಾರಾಜ, ಕನ್ಯಕುಬ್ಜ, ಇವರಿಗೆ— ದಿಲ್ಲಿಯ ಸಮ್ರಾಟ್ ಪೃಥ್ವೀರಾಜ ಚವ್ಹಾಣ ಇವರ ವಿನಂತಿ.

ಹಿಂದುದೇಶವನ್ನು ಪಾದಾಕ್ರಾಂತಮಾಡಿಕೊಳ್ಳಬೇಕೆಂದು ಶಹಾಬುದ್ದೀನ ಘೋರಿಯು ದಿಲ್ಲಿಯ ಮೇಲೆ ದಂಡೆತ್ತಿ ಹೊರಟಿರುವನು. ಭಾರತದಲ್ಲಿ ಯವನರ ಅಧಿಕಾರ ನೆಲೆಗೊಳ್ಳಬೇಕೆಂದು ಅವನು ಹೆಬ್ಬಯಕೆಯುಳ್ಳವನಾಗಿರುವನು. ನಾವೆಲ್ಲರೂ ಒಕ್ಕಟ್ಟಿನಿಂದ ಕಾದಿ, ಅವನನ್ನು ಪರಾಭವಗೊಳಿಸಿದರೆ, ಹಿಂದುಸ್ತಾನದಲ್ಲಿ

ಹಿಂದುರಾಜರ ಅಸ್ತಿತ್ವವು ಸ್ಥಿರವಾಗುವದು. ಈ ಪ್ರಸಂಗದಲ್ಲಿ ಅಂತರಂಗದ ದ್ವೇಷಾಸೂಯೆಗಳಿಗೆ ಆಸ್ಪದವಿತ್ತರೆ, ಪ್ರಬಲ ಶತ್ರುವಿನ ಕೈಯಿಂದ ಪಾರಾಗುವದು ಎಲ್ಲ ರಾಜರಿಗೂ ಕಠಿಣವಾಗಬಹುದು. ಎಲ್ಲ ಮಾಂಡಲಿಕ ಅರಸರು ಅವನಿಗೆ ಎದುರಾಗುವದಕ್ಕೆ ಸಿದ್ಧರಿರುವರು. ನೀವಾದರೂ ಸಸೈನ್ಯವಾಗಿ ಹೊರಟು ಬಂದು ಬೇಗನೆ ನಮ್ಮ ದಳವನ್ನು ಕೂಡಬೇಕು. ರಾಷ್ಟ್ರಧರ್ಮವನ್ನು ಬಲ್ಲವರಾದ ನಿಮಗೆ ಹೆಚ್ಚಿಗೆ ಬರೆಯಲಾರೆನು.

ತಮ್ಮ ಕೃಪಾಭಿಲಾಷಿ,

ಪೃಥ್ವೀರಾಜ ಚವ್ಹಾಣ."

ಜಯಚಂದ್ರನು ಮುಗುಳು ನಗೆಯಿಂದ ಪತ್ರವನ್ನೋದತೊಡಗಿದ್ದನು. ತನಗೆ ಪೃಥ್ವೀರಾಜನು ವಿನಂತಿ ಮಾಡಿಕೊಂಡದ್ದನ್ನು ನೋಡಿ ಅವನಿಗೆ ಸಂಭ್ರಮವಾಯಿತು. ಈ ಪ್ರಸಂಗದಲ್ಲಿ ಅವನಿಗೆ ಸಹಾಯ ಮಾಡಿದರೆ ತನ್ನ ಮನೋಭೀಷ್ಟ ಈಡೇರುವದಕ್ಕೆ ಅನುಕೂಲವಾಗುವದೆಂದು ಆತನು ಲೆಕ್ಕ ಹಾಕಿದನು. ತಾನು ಪೃಥ್ವೀರಾಜನ ಸರಿಸಮಾನಸ್ಕಂಧನಾಗಬೇಕೆಂದೂ, ಅವನಿಗೆ ಕೊಡತಕ್ಕ ಕಾಣಿಕೆಯನ್ನು ಮುಂದೆ ಕೊಡಬಾರದೆಂದೂ, ಸಾಧಿಸಿದರೆ ಅನಂಗಪಾಲನ ರಾಜ್ಯದಲ್ಲಿಯ ಅರ್ಧರಾಜ್ಯವನ್ನು ಬೇಡಬೇಕೆಂದೂ ಅವನು ಹೊಂಚು ಹಾಕಿದ್ದನು.

"ಚೈತಸಿಂಹಜೀ, ನಿಮ್ಮ ಮಹಾರಾಜರ ವಿನಂತಿಯ ಮೇರೆಗೆ ನಾಳೆಗೆ ಸೈನ್ಯ ಸಹಿತನಾಗಿ ಹೊರಡುವೆನು. ಹಿಂದುಭೂಮಿಯಲ್ಲಿ ಪರಕೀಯರ ಅಧಿಕಾರ ನೆಲೆಗೊಳ್ಳಬೇಕೆಂದು ಯಾರು ಇಚ್ಛಿಸುವರು? ಹಿಂದಕ್ಕೆ ಗಿಝುನೀ ಮಹಮ್ಮೂದನಿಂದ ಆರ್ಯಾವರ್ತವು ಘಾಸಿಯಾದದ್ದನ್ನು ಇಷ್ಟರಲ್ಲೇ ಮರೆಯಬಹುದೆ? ರಾಕ್ಷಸೀ ರಾಜ್ಯ ಲೋಭದಿಂದ ಸಾಗಿ ಬಂದ ಶಹಾಬುದ್ದೀನನನ್ನು ಏಳು ಕೆರೆ ನೀರು ಕುಡಿಸಿ ಕಳುಹಿಸದಿದ್ದರೆ ಕ್ಷಾತ್ರಕುಲದಲ್ಲಿ ಜನಿಸಿ ಫಲವೇನು? ನಿಮ್ಮ ಮಹಾರಾಜರಿಗೆ ಇಷ್ಟುಮಾತ್ರ ಹೇಳಬೇಕು ಕಂಡಿರಾ. ಸ್ವಾರ್ಥದ ದುಷ್ಟ ಲಹರಿಗೆ ಬಿದ್ದು ಕೃತಘ್ನರಾಗಕೂಡದು; ಬಾಂಧವ್ಯವನ್ನು ಮರೆಯಕೂಡದು. ಇದಕ್ಕಿಂತ ಹೆಚ್ಚು ಮತ್ತೇನು ಹೇಳಲಿ?"

ಜಯಚಂದ್ರನ ಮನೋಗತವು ಚೈತಸಿಂಗನಿಗೆ ತಿಳಿಯಿತು. ಆಗ ಅವನು ಹೆಚ್ಚು ಮಾತನಾಡುವ ಸಾಹಸಕ್ಕೆ ಹೋಗದೆ:—"ಮಹಾರಾಜರೇ, ನಿಮ್ಮ ಸಂದೇಶವನ್ನು ಸಮ್ರಾಟರಿಗೆ ಅರುಹುವೆನು. ಇನ್ನು ಹೆಚ್ಚು ಹೊತ್ತು ಇಲ್ಲಿ ನಿಲ್ಲುವಂತಿಲ್ಲ. ದಿಲ್ಲಿಗೆ ಹೋಗಿ ಅಲ್ಲಿಂದ ಬೇಗನೆ ಅಬೂಗಡಕ್ಕೆ ತೆರಳಬೇಕಾಗುವದು. ಅಲ್ಲಿಯ ಸೈನ್ಯವನ್ನಾದರೂ ಆದಷ್ಟು ಬೇಗನೆ ತರಬೇಕಾಗುವದು. ಬಹಳ ಮಾಡಿ ತಿರೋರಿಯ ಬೈಲಿನಲ್ಲಿ ರಣಕಂದನ ನಡೆಯುವದಾಗಿ ತಿಳಿಯುತ್ತದೆ" ಎಂದು ಹೇಳಿ, ಜಯಚಂದ್ರನಿಗೆ ನಮಿಸಿ, "ಬರುತ್ತೇನೆ"ಂದು ಹೇಳಿ, ಅವನಪ್ಪಣೆ ಪಡೆದು ಅಲ್ಲಿಂದ ಹೊರಟನು.

ಅವನು ಹೊರಟ ಕೂಡಲೆ ಜಯಚಂದ್ರನು ತನ್ನ ಸೇನಾಪತಿಯಾದ ಕಹರ ಕಂಠೀರವನನ್ನು ಕುರಿತು:—“ ಶಹಾಬುದ್ದೀನನ ವಿನಂತಿಯನ್ನು ಮನ್ನಿಸುವದಕ್ಕಿಂತ ಪೃಥ್ವಿಯ ವಿನಂತಿಗೆ ಮಾನ ಕೊಡುವದೇ ಸದ್ಯದ ಸ್ಥಿತಿಯಲ್ಲಿ ಯೋಗ್ಯವಾಗಿ ತೋರುವದು. ನೀವು ಬೇಗನೆ ಸೈನ್ಯಸಿದ್ಧಗೊಳಿಸಿರಿ. ನಾಳೆ ಇಲ್ಲಿಂದ ಹೊರಡಲಿಕ್ಕೇ ಬೇಕು.”

ಜಯಚಂದ್ರನ ಮನೋವೃತ್ತಿಯಲ್ಲಿ ಒಮ್ಮೆಲೆ ಈ ಬಗೆಯ ಅಭ್ಯಂತರವಾದದ್ದನ್ನು ನೋಡಿ, ಮಂತ್ರಿ-ಸೇನಾಪತಿಗಳಿಗೆ ಪರಮಾಶ್ಚರ್ಯವಾಯಿತು. ಕಹರ ಕಂಠೀರವನು ರಾಜಾಜ್ಞೆಯ ಮೇರೆಗೆ ಸೈನ್ಯಸಿದ್ಧತೆಗಾಗಿ ತೊಡಗಿದನು. ತಂದೆಯು ಪೃಥ್ವೀರಾಜನ ಸಹಾಯಕ್ಕಾಗಿ ತೆರಳಲುದ್ಯುಕ್ತನಾದದ್ದನ್ನು ನೋಡಿ, ಸ್ವಾಭಿಮಾನಿಯಾದ ಸಂಯುಕ್ತೆಗೆ ಮಹದಾನಂದವಾಯಿತು. ಸ್ವದೇಶದ ಅಭ್ಯುದಯಕ್ಕಾಗಿ ಯತ್ನಿಸುವದನ್ನು ನೋಡಿ ಸ್ವದೇಶಪ್ರೇಮಿಗಳಿಗೆ ಆನಂದವಾಗದೇನು ಮಾಡೀತು?

ಶಹಾಬುದ್ದೀನನು ಸ್ವದೇಶದಿಂದ ಹೇರಳವಾಗಿ ಸೈನ್ಯ ತರಿಸಿಕೊಂಡಿದ್ದನು. ತನ್ನ ಅಜಿಂಕ್ಯವಾದ ಸೇನೆಯ ಸಹಾಯದಿಂದ ಒಂದೇ ಹೊಡೆತಕ್ಕೆ ಉತ್ತರಾಪಥವನ್ನು ಕೈವಶಮಾಡಿಕೊಳ್ಳುವೆನೆಂಬ ಹೆಮ್ಮೆಯು ಅವನಿಗೆ ಬಹಳವಾಗಿತ್ತು. ಅವನು ತನ್ನ ಸೈನ್ಯದಲ್ಲಿ ಎರಡು ಭಾಗ ಮಾಡಿ, ಒಂದು ಭಾಗವನ್ನು ನಿಸುರತಖಾನನ ಕೈಯಲ್ಲಿ ಕೊಟ್ಟು, ಚಿತ್ರರೇಖೆಯನ್ನು ವಶಮಾಡಿಕೊಳ್ಳುವದಕ್ಕೆ ಬಟೆಂಡಾಗಡದ ಮೇಲೆ ಕಳಿಸಿದನು; ಮತ್ತೊಂದು ಪಡೆಯ ಸೇನಾಧಿಪತ್ಯವನ್ನು ತಾನೇ ವಹಿಸಿ, ಪೃಥ್ವೀರಾಜ ಚವ್ಹಾಣನ ಮೇಲೇರಿ ಹೊರಟನು.

ಬಟೆಂಡಾಗಡದ ಹಾಗು ಚಿತ್ರರೇಖೆಯ ರಕ್ಷಣೆಯಾಗಬೇಕೆಂದು ಪೃಥ್ವೀರಾಜನು ಅಮರಸಿಂಹನ ಸಹಾಯಕ್ಕೆ ಚೈತಸಿಂಹನನ್ನು ಹೇರಳವಾದ ಸೈನ್ಯದೊಂದಿಗೆ ಕಳುಹಿಸಿದ್ದನು. ಜಯಚಂದ್ರ, ಸಮರಸಿಂಹ, ಭೀಮದೇವ ಮೊದಲಾದ ಕ್ಷತ್ರಿಯ ರಾಜರನ್ನೊಳಗೊಂಡ ತಾನು ಘೋರಿಗೆ ಎದುರಾಗುವದಕ್ಕೆ ಒಳ್ಳೆಯ ರಭಸದಿಂದ ಸಾಗಿದನು. ಕನ್ಹ, ಚವ್ಹಾಣ,ಕೈಮಾಷ, ಚಾಮುಂಡರಾಯ, ದೇವರಾಯ ಮೊದಲಾದ ಅವನ ಶೂರ ಸರದಾರರು ಶಹಾಬುದ್ದೀನನ ಗರ್ವಭಂಗ ಮಾಡಬೇಕೆಂದು ಒಳ್ಳೆಯ ಆತುರಗೊಂಡಿದ್ದರಿಂದ ವಾಯುವೇಗದಿಂದ ಧಾವಿಸಿ ನಡೆದಿದ್ದರು.

ತಿರೋರಿಯ ಬೈಲಿನಲ್ಲಿ ಎರಡೂ ಸೈನ್ಯಗಳು ಕೂಡಿದವು. ಶಹಾಬುದ್ದೀನನ ಕಡೆಗಿದ್ದ ಪಿರೋಜಖಾನ, ಖುರಾಸನಖಾನ, ತಾತಾರಖಾನ ಮೊದಲಾದ ಸಂಗ್ರಾಮಪಟುಗಳು ಜೀವದ ಹಂಗುದೊರೆದು ಕಾದತೊಡಗಿದರು. ತಿರೋರಿಯ ಕದನದಲ್ಲಿ ಜಯಸಂಪಾನೆಯಾದರೆ ಯವನರ ವರ್ಚಸ್ಸು ಉಳಿಯುವದೆಂದೂ, ಹಾಗೆ ಆಗದಿದ್ದರೆ ತಾವು ಹಿಂದುಸ್ತಾನದಲ್ಲಿ ಕಾಲೂರಿ ನಿಲ್ಲುವದು ಕಠಿಣವಾಗುವದೆಂದೂ ಶಹಾಬುದ್ದೀ

ನನು ತಿಳಿದು, ತನ್ನ ಸೈನಿಕರಿಗೆ ಒಳ್ಳೇ ಪ್ರೋತ್ಸಾಹನೆ ಕೊಡತೊಡಗಿದ್ದನು. ಅವನ ಶೂರರಾದ ಪಠಾಣ ಸೈನಿಕರು ತಮ್ಮ ಪರಾಕ್ರಮದ ಪರಾಕಾಷ್ಠೆ ತೋರಿಸತೊಡಗಿದ್ದರು.

ಪೃಥ್ವೀರಾಜ ಚವ್ಹಾಣ, ಜಯಚಂದ್ರ ರಾಠೋಡ, ರಾಣಾ ಸಮರಸಿಂಹ ಮೊದಲಾದ ಸಮರ ಕೇಸರಿಗಳು ತಮ್ಮ ವೀರಕ್ಷತ್ರಿಯ ಸೇನೆಯೊಂದಿಗೆ ಶಹಾಬುದ್ದೀನನ ಸೈನ್ಯವನ್ನು ಅಂತಕನೋಪಾದಿಯಲ್ಲಿ ಸಂಹರಿಸತೊಡಗಿದ್ದರು. ಕನ್ಹ,ಚವ್ಹಾಣ, ಕೈಮಾಷ, ಕಹರ ಕಂಠೀರವ ಮೊದಲಾದ ಸೇನಾಪತಿಗಳೂ ಸರದಾರರೂ ವೈ ಮರೆದು ಕಾದಲಾರಂಭಿಸಿದ್ದರು. ಈ ತುಮುಲವಾದ ಯುದ್ಧದಲ್ಲಿ ಉಭಯಪಕ್ಷದೊಳಗಿನ ದಂಡಾಳುಗಳು ಸಾವಿರಗಟ್ಲೆ ಭೂಮಿಗೆ ಬಿದ್ದರು. ಸಮರಭೂಮಿಯು ರಕ್ತಸಿಂಚಿತ ಆರಕ್ತವರ್ಣದಿಂದ ಭೀಷಣತೆಯನ್ನು ಹೊಂದಿತು. ನೆತ್ತರಿನ ಕಾಲುವೆಗಳು ಹರಿಯತೊಡಗಿದವು! ವಿಜಯಲಕ್ಷ್ಮಿಯು ಇನ್ನೂ ಯಾರ ಕೊರಳಲ್ಲಿಯೂ ಮಾಲೆ ಹಾಕಿರಲಿಲ್ಲ.

ಪೃಥ್ವೀರಾಜನೂ ಚಿತೋಡದ ರಾಣಾ ಸಮರಸಿಂಹನೂ ಯವನ ಸೈನ್ಯದ ಮಧ್ಯದಲ್ಲಿ ಹೊಕ್ಕು, ಒಳ್ಳೇ ವಿಕ್ರಮದಿಂದ ಕಾದತೊಡಗಿದ್ದರು. ಜಯಚಂದ್ರ, ಭೀಮದೇವ ಮೊದಲಾದವರು ಪಠಾಣಸೈನ್ಯವನ್ನು ಸುತ್ತುಗಟ್ಟಿದರು ಮಾತ್ರ. ಕ್ಷತ್ರಿಯ ವೀರರ ಹೊಡೆತಕ್ಕೆ ಯವನರು ಜರ್ಜರಿತರಾಗತೊಡಗಿದರು. ಕಡೆಗೆ ಯವನ ಸೈನ್ಯವು ಕಾಲ್ದೆಗೆಯುವ ಲಕ್ಷಣ ತೋರತೊಡಗಿತು. ಶಹಾಬುದ್ದೀನನು ಎಷ್ಟು ಬಗೆಯಿಂದ ಉತ್ಸಾಹವಿತ್ತರೂ ಅದು ತಡೆದು ನಿಲ್ಲದಾಯಿತು.

ಯವನ ಸೈನಿಕರು ಕಾಲ್ದೆಗೆಯುವ ಲಕ್ಷಣ ತೋರತೊಡಗಿದ ಕೂಡಲೆ ಕ್ಷತ್ರಿಯ ಸೈನ್ಯವು ದ್ವಿಗುಣಿತ ವೀರಾವೇಶದಿಂದ ಕಾದಲಾರಂಭಿಸಿತು. ವಿಜಯಶ್ರೀಯು ಕಡೆಗೆ ಪೃಥ್ವೀರಾಜನಿಗೇ ಮಾಲೆ ಹಾಕಿದಳು. ಶಹಾಬುದ್ದೀನನ ಹತಾಶರಾದ ಸೈನಿಕರು ದಿಕ್ಕುಗಾಣದೆ ಓಡತೊಡಗಿದರು. ಪೃಥ್ವೀರಾಜನ ಕಡೆಯ ಸೈನಿಕರು ಜಯಭೇರಿಯ ನಿನಾದದೊಂದಿಗೆ ವಿಜಯಾನಂದೋತ್ಸವದಿಂದ ಸ್ವನಿವಾಸವನ್ನು ಹೊಂದಿದರು!

ತಿಟೋರಿಯ ಕದನದಲ್ಲಿ ತಮ್ಮ ಪಕ್ಷವು ಜಯಶಾಲಿಯಾದ ಸಂಗತಿಯು ಅಮರಸಿಂಹನಿಗೂ ಚೈತಸಿಂಹನಿಗೂ ತಿಳಿದ ಕೂಡಲೆ ಅವರು ಇಮ್ಮಡಿ ಉತ್ಸಾಹದಿಂದ ನಿಸುರತಖಾನನ ಕೂಡ ಕಾದತೊಡಗಿದರು. ಕಡೆಗೆ ಖಾನನು ಚಿತ್ರರೇಖೆಯ ಆಶೆಯನ್ನು ಬಿಟ್ಟು ರಣಭೂಮಿಯಿಂದ ಕಾಲ್ದೆಗೆದನು.

ಪರಾಭೂತನಾದ ಶಹಾಬುದ್ದೀನನು ಭಗ್ನಮನೋರಥನಾದನು. ಅವನಿಗೆ ಆರ್ಯಾವರ್ತದಲ್ಲಿ ನಿಂತು ನೀರು ಕುಡಿಯುವದೂ ಕಠಿಣವಾಯಿತು. ಅವನು ತನ್ನ

ಹರಿಬಿದ್ದ ಸೈನ್ಯವನ್ನು ಕೂಡಿಕೊಂಡು ಖೈಬರಘಟ್ಟದ ಹಾದಿಯನ್ನು ಹಿಡಿದನು. ತಿರೋರಿಯ ಕಾಳಗವು ಅವನಿಗೆ ಚೆನ್ನಾಗಿ ಪೆಟ್ಟುಕೊಟ್ಟದ್ದರಿಂದ ಮುಂದೆ ಎಷ್ಟೋ ದಿನಗಳ ವರೆಗೆ ಅವನು ಆರ್ಯಾವರ್ತದಲ್ಲಿ ಹೆಜ್ಜೆಯನ್ನಿಕ್ಕಲಿಲ್ಲ!

---

ಪ್ರೇಮ ಪತ್ರಿಕೆ.

"ಚಿತ್ರರೇಖೆ, ಯುದ್ಧಸಮಾಪ್ತಿಯನಂತರ ಮಹಾರಾಜರು ಕನ್ಯಕುಬ್ಜಕ್ಕೆ ಬರಬಹುದೆಂದು ಭಾವಿಸಿದ್ದೆನು; ಆದರೆ ನನ್ನ ಆಶೆಯು ವ್ಯರ್ಥವಾಯಿತು. ಸದೈವ ರಾಜಕಾರಣ ತತ್ಪರರಿಗೆ ಆದರಾತಿಥ್ಯಗಳನ್ನು ಹೊಂದುತ್ತ ತಿರುಗುವದಕ್ಕೆ ಅವಕಾಶವೆಲ್ಲಿ ದೊರೆಯುವದು? ಅಂತೆಯೇ ಅವರು ನನ್ನ ತಂದೆಯವರ ವಿನಂತಿಯ ಮೇರೆಗೆ ಇಲ್ಲಿಗೆ ಬರಲಿಲ್ಲ. ನಾನು ಅವರನ್ನೊಮ್ಮೆ ಕಣ್ತುಂಬ ನೋಡಿ ಆನಂದಪಡಬೇಕೆಂದು ಹಾರೈಸಿಕೊಂಡಿದ್ದೆನು."

ಸಂಯುಕ್ತೆಯು ಸೌಧಾಗ್ರದಲ್ಲಿ ಚಿತ್ರರೇಖೆಯೊಡನೆ ಕುಳಿತುಕೊಂಡಿದ್ದಳು. ಪೃಥ್ವೀರಾಜನ ಮೂರ್ತಿಯನ್ನು ತನ್ನ ಹೃದಯಮಂದಿರದಲ್ಲಿರಿಸಿಕೊಂಡು ಅವಳು ತದೇಕ ಧ್ಯಾನಳಾಗಿರುತ್ತಿದ್ದಳು. ಕುಳಿತರೆ ಪೃಥ್ವೀರಾಜ, ನಿಂತರೆ ಪೃಥ್ವೀರಾಜ; ಹೀಗೆ ಅವಳಿಗೆ ತನ್ನ ಮನೋರಮಣನ ನಿದಿಧ್ಯಾಸದ ಹೊರತು ಅನ್ಯ ವಿಷಯವೇ ಇಲ್ಲದಾಗಿತ್ತು. ಜಯಚಂದ್ರನು ಎರಡು ದಿನ ಕನೋಜಕ್ಕೆ ಬರುವ ಬಗ್ಗೆ ಪೃಥ್ವೀರಾಜನಿಗೆ ಹೇಳಿದನು. ಯುದ್ಧದ ಗೊಂದಲದಲ್ಲಿ ರಾಜ್ಯದಲ್ಲುಂಟಾದ ಹೆಚ್ಚು-ಕಡಿಮೆಗಳನ್ನು ಸುವ್ಯವಸ್ಥೆಗೊಳಿಸುವ ಆವಶ್ಯಕತೆಯಿದ್ದುದರಿಂದ ಅವನು ಜಯಚಂದ್ರನ ಮಾತುಗಳನ್ನು ನಿರಾಕರಿಸಿ ದಿಲ್ಲಿಗೆ ಹೋದನು. ತನ್ನ ಮನೋಹರನನ್ನು ಕಂಡು ಕೃತಾರ್ಥಳಾಗಬೇಕೆಂಬ ಸಂಯುಕ್ತೆಯು ಅವನು ದಿಲ್ಲಿಗೆ ಹೋದ ಸಂಗತಿಯನ್ನು ಕೇಳಿದೊಡನೆಯೆ, ನಿರಾಶೆಯಿಂದ ಮೇಲಿನಂತೆ ಉದ್ಗಾರ ತೆಗೆದಳು. ಅವಳ ಮನಸ್ಸಿನ ಸ್ಥಿತಿಯನ್ನು ಕಂಡು ಚಿತ್ರರೇಖೆಯ ಮನಸ್ಸು ಕಳವಳಪಟ್ಟಿತು. ತನ್ನ ಮೈತ್ರಿಣಿಯ ಮನೋಭೀಷ್ಟವು ಸಿದ್ದಿಸಿ ಅವಳು ಎಂದು ಸಂತುಷ್ಟಳಾಗುವಳೋ ಏನೋ ಎಂದು ಚಿತ್ರರೇಖೆಯು ಆತುರಪಡತೊಡಗಿದ್ದಳು. ತನ್ನ ಗೆಳತಿಯ ಹೃದಯ ರಮಣನ ಭಾವಚಿತ್ರವನ್ನೊಮ್ಮೆ ತೋರಿಸಬೇಕೆಂದು ಅವಳು ಬಹು ಪ್ರಯಾಸದಿಂದ ಪೃಥ್ವೀರಾಜನ ಚಿತ್ರವನ್ನು ತರಿಸಿದ್ದಳು. ಪ್ರತ್ಯಕ್ಷವಿಲ್ಲದಿದ್ದರೂ ಭಾವಪಟದರ್ಶನದಿಂದಾದರೂ ಅವಳ ಮನಸ್ಸನ್ನು ಸಮಾಧಾನಪಡಿಸಬೇಕೆಂದು ಅವಳು:—"ದೇವೀ, ಇಗೊಳ್ಳಿರಿ; ಈ ಚಿತ್ರವನ್ನು ತೆಗೊದುಕೊಂಡು ಕಣ್ತುಂಬ ನೋಡಿರಿ" ಎಂದು ನುಡಿದು, ಪೃಥ್ವೀರಾಜನ ಭಾವಚಿತ್ರವನ್ನು ತನ್ನ ಗೆಳತಿಯ ಕೈಯಲ್ಲಿ ಕೊಟ್ಟಳು.

ಸಂಯುಕ್ತೆಯು ಅದನ್ನು ತೆಗೆದುಕೊಂಡು ದಿಟ್ಟಿಸಿ ನೋಡಿ:—"ಚಿತ್ರರೇಖೇ, ಇದಾರ ಚಿತ್ರವೇ?"

"ಅವೇ? ಅದು 'ಅವರ' ಚಿತ್ರವು! ನಿಮ್ಮ 'ಅವರ' ಚಿತ್ರವು!" ಚಿತ್ರರೇಖೆಯು ನಗುನಗುತ್ತ:—"ದೇವೀ, ನಿಮ್ಮ ಮನೋಮಂದಿರದಲ್ಲಿ ವಾಸವಾಗಿದ್ದ ಹೃದಯ ಸಾರ್ವಭೌಮನನ್ನು ನೀವು ಗುರತಿಸಲಿಲ್ಲವಲ್ಲ!"

ಸಂಯುಕ್ತೆಯು ಆ ಚಿತ್ರಕ್ಕೆ ನಮಿಸಿ, ಪ್ರೇಮಭಾವದಿಂದೊಮ್ಮೆ ಚುಂಬಿಸಿದಳು. ಆ ಚಿತ್ರವನ್ನು ಕಣ್ಣಿಟ್ಟು ನೋಡುತ್ತ, ವಿಸ್ಮೃತಿಯಿಂದ ಅವಳು:—"ಅಹಹಾ! ಎಂತಹ ದಿವ್ಯ ಸ್ವರೂಪವಿದು?"

"ದೇವೀ, ಚಿತ್ರದೊಳಗಿನ ರೂಪವನ್ನು ನೋಡಿ ನೀವಿಷ್ಟು ಬೆರಗಾಗುವಿರಿ; ಬೆರಳ ಕಚ್ಚುವಿರಿ. ಪ್ರತ್ಯಕ್ಷವಾಗಿ ನೋಡಿದರೆ, ಆ ಮನ್ಮಥಸದೃಶ ರೂಪವಂತನನ್ನು ನಿಮ್ಮ ಬಾಹುಪಾಶದಿಂದ ಹೊರಗೆ ಬಿಡಲಾರಿರಿ. ಸ್ಮರಶರರೂಪ, ರೂಪಕ್ಕೆ ಸರಿಯಾದ ದೇಹಯಷ್ಟಿ, ದೇಹಯಷ್ಟಿಗೆ ಸರಿಯಾದ ಅದ್ವಿತೀಯ ಶಕ್ತಿ, ಶಕ್ತಿಗೆ ಸರಿಯಾದ ಶೂರತನ, ಶೂರತನಕ್ಕೆ ಸರಿಯಾದ ಮನೋಧೈರ್ಯ, ಧೈರ್ಯಕ್ಕೆ ಸರಿಯಾದ ದೃಢನಿಶ್ಚಯ ಮೊದಲಾದ ದಿವ್ಯ ಗುಣಗಳಿಂದ ಆ ಪುರುಷಸಿಂಹನು ಅದ್ವಿತೀಯನಿರುವನು.

"ಚಿತ್ರರೇಖೆ, ನನ್ನ ಮನೋಭೀಷ್ಟೆಯು ಹೇಗೆ ನೆರವೇರಬಹುದವ್ವಾ? ನನ್ನ ತಂದೆಯವರು ಈಗಾಗಲೆ ಸ್ವಯಂವರವನ್ನು ಈಡೇರಿಸಬೇಕೆಂದು ಮಾಡಿರುವರು."

"ಒಳಿತಾಯಿತು. ನೀವು ಸ್ವಯಂವರ ಮಂಟಪದಲ್ಲಿ ನಿಮ್ಮ ಪ್ರಿಯಕರರ ಕೊರಳಲ್ಲೇ ಮಾಲೆ ಹಾಕಿದರಾಯಿತು."

"ಸಖೀ, ಸ್ವಯಂವರಕ್ಕೆ ಆ ಮಹಾನುಭಾವರು ಬರಬಹುದಷ್ಟೇ?"

"ಬಾರದೇನು ಮಾಡಿಯಾರು? ವಿನಂತಿಪತ್ರಿಕೆಯನ್ನು ನೀವು ನಿಮ್ಮ ಹೃದಯ ಸಮ್ರಾಟನ ಕಡೆಗೆ ಕಳುಹಿಸಿರಿ" ಎಂದು ನುಡಿದು, ಚಿತ್ರರೇಖೆಯು ಸ್ವಲ್ಪ ಹೊತ್ತು ಆಲೋಚಿಸಿ:—"ನಾನು ನಿಮ್ಮ ಸಂದೇಶವನ್ನು ಪೃಥ್ವೀರಾಜರಿಗೆ ತಿಳಿಸುವೆನು."

ಸಂಯುಕ್ತೆಯ ಸ್ವಯಂವರವನ್ನು ಬೇಗನೆ ನೆರವೇರಿಸಬೇಕೆಂದು ಜಯಚಂದ್ರನು ನಿಶ್ಚಯಿಸಿದ್ದನು. ತನ್ನ ಪ್ರೀತಿಯ ಕುವರಿಯು ಪ್ರೌಢಳೂ ಸದ್ಗುಣವತಿಯೂ ಇದ್ದುದರಿಂದ ಯೋಗ್ಯನಾದ ವರನನ್ನು ತಾನೇ ಆರಿಸಿ ವರಿಸಲೆಂದು ಜಯಚಂದ್ರನ ವಿಚಾರವಿತ್ತು. ಪೃಥ್ವೀರಾಜನನ್ನೇ ವರಿಸುವೆನೆಂದು ಹೇಳುವದಕ್ಕೆ ಸಂಯುಕ್ತೆಗೆ ಧೈರ್ಯಬರಲೊಲ್ಲದು. ಸ್ವಯಂವರ ಕಾಲಕ್ಕೆ ಎಲ್ಲ ರಾಜಪುತ್ರರು ಆಗಮಿಸಿದಂತೆ, ತನ್ನ ಪ್ರಿಯಕರನಾದರೂ ಬರುವನೆಂಬ ವಿಶ್ವಾಸವು ಅವಳಿಗಿದ್ದುದರಿಂದ ಅವನನ್ನೇ ವಿವಾಹ ಮಾಡಿಕೊಳ್ಳುವ ಸುಯೋಗವು ತಾನಾಗಿ ಒದಗುವವೆಂದು ನಿಶ್ಚಯಿಸಿದಳು. ಅವಳು ಪೃಥ್ವೀರಾಜನನ್ನು ಪ್ರೀತಿಸುತ್ತಿರುವದು ಚಿತ್ರರೇಖೆಯೊಬ್ಬಳಿಗೇ ಗೊತ್ತಿತ್ತು. ಅವಳಾದರೂ ತನ್ನ ಗೆಳತಿಯ ಕಟ್ಟಪ್ಪಣೆಯ ಮೇರೆಗೆ ಈ ವಿಷಯವನ್ನು ಗುಪ್ತವಿರಿಸಿದ್ದಳು.

ಒಬ್ಬಳೇ ಒಬ್ಬ ಮಗಳಾದ ಸಂಯುಕ್ತೆಯ ಸ್ವಯಂವರ ಸಮಾರಂಭವು ಒಳ್ಳೆಯ ವಿಜೃಂಭಣೆಯಿಂದ ಜರುಗುವದೆಂದು ಅವಳ ತಾಯಿಯಾದ ವಿಪುಲಾದೇವಿಯು ಸಂಭ್ರಮಗೊಂಡಿದ್ದಳು. ಇಂತಹ ಶುಭ ಪ್ರಸಂಗದಲ್ಲಿ ಮಗಳು ಖಿನ್ನ ಮನಸ್ಕಳಾಗಿರುವದರ ಮರ್ಮವು ಅವಳಿಗೆ ತಿಳಿಯದಾಗಿತ್ತು. ನಿಜ ಸ್ಥಿತಿಯನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ ಅವಳು ಮಗಳ ಬಳಿಗೆ ಬಂದಳು. ಅಲ್ಲಿ ಚಿತ್ರರೇಖೆಯೂ ಇದ್ದುದರಿಂದ ಅವಳಿಂದಲಾದರೂ ಸಂಯುಕ್ತೆಯ ಮನಸ್ಸಿನ ಉದ್ವಿಗ್ನತೆಯ ಕಾರಣ ತಿಳಿಯಬಹುದೆಂದು ವಿಪುಲಾದೇವಿಯು ಭಾವಿಸಿದ್ದಳು.

"ಚಿತ್ರರೇಖೆ, ನಿನ್ನ ಗೆಳತಿಯ ಸ್ವಯಂವರವು ನಾಲ್ಕೆಂಟು ದಿನಗಳಲ್ಲಿ ಒದಗಿಬಂದಿರುವದು. ವಿವಾಹ ಸಮಾರಂಭವಾದ ಮೇಲೆ ನಿನ್ನನ್ನು ಬಟಿಂಡಾಗಡಕ್ಕೆ ಕಳಿಸುವೆವು. ಅಲ್ಲಿಯ ವರೆಗೆ ತಡೆಯಬೇಕೆಂದು ಮಹಾರಾಜರು ಅಮರಸಿಂಹರಿಗೆ ತಿಳಿಸಿರುವರು."

"ಅವಶ್ಯ, ಅತ್ಯವಶ್ಯ. ನನ್ನ ಜೀವದ ಗೆಳತಿಯ ವಿವಾಹಕಾರ್ಯವು ಈಡೇರಿದ ಹೊರತು ನಾನೆಲ್ಲಿ ಹೋಗಬೇಕೆನ್ನುವೆನು?" ಎಂದು ಚಿತ್ರರೇಖೆಯು ನುಡಿದು, ವಿಪುಲಾದೇವಿಯನ್ನು ಕುರಿತು:—"ರಾಜ್ಞಿಯವರೆ, ವಿವಾಹ ಸಮಾರಂಭಕ್ಕೆ ಎಲ್ಲ ರಾಜರೂ ಆಗಮಿಸಬಹುದಲ್ಲವೆ?" ಎಂದು ಬುದ್ಧಿಪೂರ್ವಕವಾಗಿ ಕೇಳಿದಳು.

"ಚಿತ್ರರೇಖೆ, ಒಳಜಗಳವು ಮತ್ತೆ ಹೊತ್ತುವ ಲಕ್ಷಣ ತೋರುತ್ತದೆ. ಮೇವಾಡದ ರಾಣಾ ಸಮರಸಿಂಹನನ್ನೂ, ಪೃಥ್ವೀರಾಜನನ್ನೂ ಕರೆಯಿಸಬಾರದೆಂದು ಅವರು ಅನ್ನುತ್ತಿರುವರು."

ತಾಯಿಯ ಈ ಮಾತುಗಳನ್ನು ಕೇಳಿದೊಡನೆಯೆ ಸಂಯುಕ್ತೆಯ ಮುಖವು ವಿಷಣ್ಣವಾಯಿತು. ಆಗ ಅವಳು ಭಯವಿಹ್ವಲಳಾಗಿ:—

"ಅಮ್ಮಾ, ಸಡಗರದ ಸಮಾರಂಭದಲ್ಲಿ ಎಲ್ಲರೂ ಬರುವದರಿಂದ ಅದು ಶೋಭಾಯಮಾನವಾಗುವದಿಲ್ಲವೆ? ಅವರಿಬ್ಬರ ವಿಷಯಕ್ಕೆ ತಂದೆಯವರು ಕ್ರುದ್ಧರಾಗಿರುವರೇಕೆ? ತಿರೋರಿಯ ಸಂಗ್ರಾಮದ ಸಂಯುಕ್ತರಾಜಮಂಡಲದಲ್ಲಿ ಈಗಾಗಲೇ ವೈಮನಸ್ಸು ಹುಟ್ಟಿತೇನು?"

"ಮಹಾರಾಜರು ರಾಜಸೂಯ ಯಾಗವನ್ನು ಪ್ರಾರಂಭಿಸಲಿರುವರು. ಆಗ ಪೃಥ್ವೀರಾಜರು ಕನೋಜದ ಸ್ವಾತಂತ್ರ್ಯವನ್ನೊಪ್ಪಿದರೆ ಮಾತ್ರ ಅವರನ್ನು ಸ್ವಯಂವರಕ್ಕೆ ಕರೆಯಿಸುವೆನೆಂದು ಮಹಾರಾಜರು ಅನ್ನುವರು."

"ಇಲ್ಲದ ಹಟ ಹಿಡಿಯುವದು ನೆಟ್ಟಗಲ್ಲ. ದಿಲ್ಲಿಯಲ್ಲೇ ಸಾಮ್ರಾಜ್ಯದ ಸಿಂಹಾಸನವಿರುವದರಿಂದ ಪರಂಪರೆಯಿಂದ ನಡೆದು ಬಂದ ಮೇರೆಗೆ ಅದಕ್ಕೆ ಕಾಣಿಕೆಯೊಪ್ಪಿಸದೆ ಮನಬಂದಂತೆ ಕುಣಿದಾಡಿದರೆ ಹೇಗೆ?"

"ನಾನಾದರೂ ಈ ವಿಷಯದಲ್ಲಿ ಅವಳಿಗೆ ತಿಳಿಹೇಳುವೆನು." ಎಂದು ವಿಪುಲಾದೇವಿಯು ನುಡಿದು:—"ಸಂಯುಕ್ತೇ, ಇತ್ತೀಚಿಗೆ ನೀನು ಖಿನ್ನಮನಸ್ಕಳಾಗಿರುವಂತೆ ಭಾಸವಾಗುವದು. ಒದಗಿ ಬಂದ ಸಮಾರಂಭದಲ್ಲಿ ಈ ಬಗೆಯಾಗಿ ಕ್ಲೇಶಗೊಳ್ಳುವದೇಕೆ?"

"ಅಮ್ಮಾ, ಇದೇನು ಕೇಳುವಿರಿ? ನಾನು ಖಿನ್ನಳಾಗಿರುವೆನೆ? ಇದನ್ನು ನಿಮಗಾರು ಹೇಳಿದರು? ಸುಮ್ಮನೆ ಏನಾದರೊಂದು ಕಲ್ಪಿಸುತ್ತಿರುವಿರಾಯಿತು."

"ಬಚ್ಚಿಡಬೇಡ; ಇದ್ದ ಸಂಗತಿಯನ್ನು ನನ್ನ ಮುಂದೆ ಹೇಳುವದಕ್ಕೆ ನಿನಗೆ ನಾಚಿಕೆಯೇಕೆ?" ಎಂದು ವಿಪುಲಾದೇವಿಯು ನುಡಿದು, ಚಿತ್ರರೇಖೆಯನ್ನು ಕುರಿತು:- 'ಚಿತ್ರರೇಖೆ, ನಿನ್ನ ಗೆಳತಿಯ ಖೇದದ ಕಾರಣವೇನು? ಯಾವದೋ ಒಂದು ನಿಮಿತ್ತದಿಂದ ಇವಳು ತನ್ನ ಮನಃಸ್ಥಿತಿಯನ್ನು ಬಚ್ಚಿಡುವದಕ್ಕೆ ಯತ್ನಿಸುವಳೆಂದು ನನಗೆ ತಿಳಿಯುತ್ತದೆ. ನೀನು ನಿಜಸ್ಥಿತಿಯನ್ನು ನನ್ನ ಮುಂದೆ ಹೇಳು."

"ರಾಣಿಯವರೇ, ಸಂಯುಕ್ತಾದೇವಿಯವರು ಉದ್ವಿಗ್ನತೆಯನ್ನು ತಳೆದಿರುವರೆಂದು ನೀವು ಹೇಗೆ ತಿಳಿದಿರಿ? ನಾನಂತೂ ಏನೊಂದನ್ನೂ ಅರಿಯೆನು." ಎಂದು ಚಿತ್ರರೇಖೆಯು ನುಡಿದು, ಬುದ್ಧಿಪೂರ್ವಕವಾಗಿ ಸಂಯುಕ್ತೆಯನ್ನು ಕುರಿತು:— "ದೇವೀ, ನಿಮ್ಮ ಮನಸ್ಸಿನೊಳಗಿನ ದುಗುಡವನ್ನು ನನ್ನೆದುರಿನಲ್ಲಿ ಬಚ್ಚಿಡಬೇಕೇ? ನೀವು ಸರಳತನದಿಂದ ನನ್ನೊಡನೆ ನಡೆದುಕೊಳ್ಳುವಿರೆಂದು ಇದುವರೆಗೂ ಭಾವಿಸಿದ್ದೆನು. ರಾಣಿಯವರ ಮಾತು ಕೇಳಿದಾಗಿನಿಂದ ನನ್ನ ಆ ತಿಳವಳಿಕೆ ಬೇರೆಯಾಯಿತು. ಮೇಲೆ ಮೇಲೆ ಸ್ನೇಹವನ್ನು ತೋರಿಸುತ್ತ, ಒಳಗಿನ ಗುಟ್ಟನ್ನು ತಿಳಿಸದೆ ವರ್ತಿಸುವ ಈ ಗುಣವನ್ನು ನೀವು ಹೊಸದಾಗಿ ಎಲ್ಲಿ ಕಲಿತಿರಿ?"

"ಚಿತ್ರರೇಖೆ, ನಿನಗೆ ಹುಚ್ಚು ಹಿಡಿಯಿತೇನು?" ಎಂದು ಸಂಯುಕ್ತೆಯು ಲಘುಸಿಟ್ಟಿನಿಂದ ನುಡಿದು, ತಾಯಿಯನ್ನು ಕುರಿತು:—"ಅಮ್ಮಾ, ನೀವು ಸುಮ್ಮನೆ ಏನಾದರೊಂದು ಮಾತನಾಡುವಿರಿ. ಕ್ಲೇಶಗೊಳ್ಳಲು ನನಗೆ ಅಂತಹ ಪ್ರಸಂಗವೇನು?"

"ಈಗ ನಿನ್ನ ಮನಸ್ಸು ಒಂದು ಬಗೆಯಾಗಿರುವದು. ಲಗ್ನ ಸಮಾರಂಭದಲ್ಲಿ ನಗುತ್ತ-ಕೆಲೆಯುತ್ತ ಇರುವದನ್ನು ಬಿಟ್ಟು ಮೋರೆಯೊಣಗಿಸಿಕೊಂಡು ಕುಳಿತುಬಿಟ್ಟರೆ ಚಂದವೇನು? ಸಂಯುಕ್ತೆ, ನೀನು ಪ್ರಬುದ್ಧಳಿರುವೆ. ಹೀಗಿದ್ದು ನಾನು ನಿನಗೆ ಹೆಚ್ಚಿಗೆ ಏನು ಹೇಳಲಿ?" ಎಂದು ನುಡಿದು ವಿಪುಲಾದೇವಿಯು ಅಲ್ಲಿಂದ ಹೊರಟುಹೋದಳು. ಆಗ ಚಿತ್ರರೇಖೆಯು ಸಂಯುಕ್ತೆಯನ್ನು ಕುರಿತು:—

"ದೇವೀ, ರಾಣಿಯವರು ನಿಮ್ಮ ಮನಸ್ಸಿನ ಉದ್ವಿಗ್ನತೆಯನ್ನು ಕಂಡುಹಿಡಿದಿರುವರು; ಆದರೆ ಕಾರಣವು ಮಾತ್ರ ಅವರಿಗೆ ಗೊತ್ತಾಗಿಲ್ಲ"

"ಚಿತ್ರರೇಖೇ, ಒಳಜಗಳವು ಮತ್ತೆ ಹೊತ್ತುವ ಲಕ್ಷಣವಿರುವದು."

" ನಿಮ್ಮ ತಂದೆಯವರ ಸ್ವಭಾವವೇ ವಿಚಿತ್ರವಾದದ್ದಿರುವದು. ಅವರು ಸ್ವಾರ್ಥದ ಲಹರಿಗೆ ಸಿಲುಕಿರುವರು. ಮಾತ್ಸರ್ಯದ ಬೀಜವು ಅವರಲ್ಲಿ ವಾಸವಾಗಿರುವದು. ಹೀಗಿದ್ದ ಮೇಲೆ ಐಕ್ಯವು ನೆಲೆಗೊಳ್ಳುವ ಬಗೆ ಹೇಗೆ?"

" ನೀನೊಂದು ಮಹತ್ವದ ಕಾರ್ಯವನ್ನು ಮಾಡಬೇಕು."

" ಅದೇನು? ದೇವಿ!"

" ಈ ಪತ್ರವನ್ನು ನೀನು ಮಹಾರಾಜರಿಗೆ ಮುಟ್ಟಿಸು."

ಹೀಗೆ ನುಡಿದು ಸಂಯುಕ್ತೆಯು ತನ್ನ ಉಡಿಯಲ್ಲಿರಿಸಿಕೊಂಡಿದ್ದ ಪತ್ರಿಕೆಯನ್ನು ಅವಳ ಕೈಯಲ್ಲಿ ಕೊಟ್ಟಳು. ಅವಳು ಆ ಪತ್ರ ತೆಗೆದುಕೊಂಡು:—

"ಮಹಾರಾಜರ ಕೈಯಲ್ಲೊ? ಯಾವ ಮಹಾರಾಜರ ಕೈಯಲ್ಲಿ ಕೊಡಬೇಕೆಂಬದನ್ನು ಹೇಳದೆ ತಿಳಿಯುವ ಬಗೆ ಹೇಗೆ?"

" ಹಾಸ್ಯ ಮಾಡುತ್ತ ಕುಳಿತುಕೊಳ್ಳುವ ಸಮಯವಿದಲ್ಲ. ಚಿತ್ರರೇಖೇ, ನನ್ನ ವಿನಂತಿಯನ್ನು ಅವರಿಗೆ ತಿಳಿಸಿ, ಸ್ವಯಂವರ ಕಾಲಕ್ಕೆ ತಪ್ಪದೆ ಬರಬೇಕೆಂದು ಬಿನ್ನಯಿಸು ಕಂಡೆಯಾ. 'ಸಂಯುಕ್ತೆಯು ನಿಮ್ಮನ್ನು ಮನಸಾ ಪ್ರೀತಿಸುವಳೆಂದೂ, ನೀವು ಬಾರದಿದ್ದರೆ ಅವಳು ಜೀವಿಸಲಾರಳೆಂದೂ ಅವರಿಗೆ ತಿಳಿಸು. ನೀನು ಜಾಣಳಿರುವೆ. ನನ್ನ ವಿಷಯಕ್ಕೆ ಪ್ರೇಮಭಾವನೆಗಳುಳ್ಳವಳಿರುವೆ. ಹೀಗಿದ್ದ ಮೇಲೆ ಹೆಚ್ಚಿಗಿನ್ನೇನು ಹೇಳಲಿ?'

"ದೇವಿ, ಚಿಂತೆಯನ್ನು ಬಿಡಿರಿ. ನಾನು ನಿಮ್ಮ ಮಹಾರಾಜರ ಮನಸ್ಸನ್ನು ನಿಮ್ಮಲ್ಲಿ ಬಿಂಬಿಸುವಂತೆ ಮಾಡುತ್ತೇನೆ." ಎಂದು ನುಡಿದು, ತನ್ನ ಗೆಳತಿಯ ಪ್ರೇಮಪತ್ರಿಕೆಯನ್ನೋದತೊಡಗಿದಳು:—

" ಪ್ರಿಯಕರಾ! ನಾನು ನನ್ನ ಸ್ಫಟಿಕ ಸದೃಶ ಹೃದಯ ಮಂದಿರದಲ್ಲಿ ನಿಮ್ಮ ಮೂರ್ತಿಯನ್ನು ನೆಲೆಗೊಳಿಸಿ, ಸದೈವ ಆರಾಧಿಸತೊಡಗಿರುವೆನು. ನನ್ನ ಹೃದಯ ಸಮ್ರಾಟನ ಪೂಜೆಗಾಗಿ ನನ್ನ ಪಂಚಪ್ರಾಣಗಳನ್ನು ಅರ್ಪಿಸಿರುವೆನು. ಹೃದಯಸ್ಥ ದೇವತೆಯು ಯಾವದೊಂದು ಕಾರಣಾಂತರದಿಂದ ದುರ್ದೈವವಶವಾಗಿ ಸ್ಥಾನಭ್ರಷ್ಟವಾದರೆ, ಅದರೊಡನೆ ನನ್ನ ಪಂಚಪ್ರಾಣಗಳೂ ತೊಲಗುವವು. ನಾಥರೆ, ನಾನು ನಿಮ್ಮನ್ನು ಮನಸಾ ವರಿಸಿರುವೆನು. ನನ್ನ ತಂದೆಯವರು ಹಟಮಾರಿತನದಿಂದ ಸ್ವಯಂವರವನ್ನು ಪ್ರಾರಂಭಿಸುವ ಲಕ್ಷಣ ತೋರುತ್ತಲಿದೆ. ನೀವು ಆಗ ಇಲ್ಲಿಗೆ ಬಂದು, ನಿಮ್ಮ ವಸ್ತುವನ್ನು ನಿಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಹೋಗಬೇಕು. ಹೆಚ್ಚಿನ ಸಂಗತಿಗಳನ್ನು ಚಿತ್ರರೇಖೆಯ ಮುಖದಿಂದ ಅರಿತುಕೊಳ್ಳಿರಿ.

ತಮ್ಮ ಚರಣಾರವಿಂದದ ದೀನ ದಾಸಿ,

**ಸಂಯುಕ್ತೆ.**

ಚಿತ್ರರೇಖೆಯು ಪತ್ರವನ್ನೋದಿದ ಮೇಲೆ ಸಂಯುಕ್ತೆಯು ಅವಳನ್ನು ಕುರಿತು ವಿನಯದಿಂದ:—"ಸಖೀ, ಈ ಕಾರ್ಯವನ್ನು ಈಡೇರಿಸಿ ಮಹತ್ಪುಣ್ಯಭಾಗಿನಿಯಾಗವ್ವಾ, ಹೋಗಿ ಬಾ! ನಿನ್ನ ಕಾರ್ಯಕ್ಕೆ ಪರಮಾತ್ಮನು ಮಂಗಳವೀಯಲಿ!"

———

ತಿರೋರಿಯ ರಣಕಂದನದಲ್ಲಿ ಪೃಥ್ವೀರಾಜನು ವಿಜಯಿಯಾದದ್ದು ಈಗ ಜಯಚಂದ್ರನಿಗೆ ಅಸಹ್ಯವಾಗಿತ್ತು. ತಾನು ಅವನಿಗೆ ಸಹಾಯ ಮಾಡತಕ್ಕದ್ದಿದ್ದಿಲ್ಲವೆಂದೂ, ಹಾಗೆ ಮಾಡಿದ್ದು ಮೂರ್ಖತನವಾಯಿತೆಂದೂ ಅವನು ಮಿಡುಕತೊಡಗಿದ್ದನು. ಹೊತ್ತಿನ ಬೆಂಕಿ ಕಡು ವೈರಿಯಾಗಿದ್ದವನಿಗೆ ಸಹಾಯಮಾಡಿ ಅವನ ಏಳ್ಗೆ ಮಾಡಿದಂತಾಯಿತೆಂದೂ, ಅವನು ವಿಜಯಮದದಿಂದ ಉನ್ಮತ್ತನಾಗಿ ಮನಬಂದಂತೆ ನಡೆದು ತನ್ನ ಮರ್ಯಾದೆಗೆ ಭಂಗವನ್ನು ತರತೊಡಗಿರುವನೆಂದೂ ತಿಳಿದು, ಅವನು ಪೃಥ್ವೀರಾಜನನ್ನು ಕೆಟ್ಟಗಣ್ಣಿನಿಂದ ನೋಡತೊಡಗಿದ್ದನು. ಪೃಥ್ವೀರಾಜನು ಮಾಂಡಲಿಕ ರಾಜರಿಂದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಳ್ಳುವದೂ, ಅಧಿರಾಜನೆಂಬ ಮರ್ಯಾದೆಯಿಂದ ತದನುಸಾರವಾಗಿ ವರ್ತಿಸುವದೂ ಜಯಚಂದ್ರನಿಗೆ ಸಹನವಿದ್ದಿಲ್ಲ. ತನಗಿಂತ ಚಿಕ್ಕವನಾದವನಿಗೆ ದೇಶದಲ್ಲಿ ಈ ಪ್ರಕಾರದ ಮಾನಮರ್ಯಾದೆಗಳೇಕೆ ದೊರೆಯಬೇಕೆಂದು ಅವನು ಕುದಿಯತೊಡಗಿದ್ದನು.

ತಾನು ಪೃಥ್ವೀರಾಜನಿಗಿಂತ ಶ್ರೇಷ್ಠನೆಂಬ ಹೆಮ್ಮೆಯಿಂದ ಜಯಚಂದ್ರನು ಅವನಿಗೆ ಕಾಣಿಕೆಯನ್ನೊಪ್ಪಿಸುತ್ತಿರಲಿಲ್ಲ. ಆತ್ಮೀಯಭಾವನೆಯಿಂದಾಗಲಿ, ಆಪ್ತಕೋಟಿಯವನೆಂಬ ಉದ್ದೇಶದಿಂದಾಗಲಿ ಕಾಣಿಕೆಯ ಹಣವನ್ನು ತೆಗೆದುಕೊಳ್ಳದಿದ್ದರೆ, ಪರಂಪರವಾಗಿ ಬಂದ ರೂಢಿಗೆ ಕುಂದು ಬರುವದೆಂದೂ, ಅಧಿರಾಜ ಸಿಂಹಾಸನದ ಗೌರವಕ್ಕೆ ಬಾಧೆ ಬರುವದೆಂದೂ ತಿಳಿದು, ಪೃಥ್ವೀರಾಜನು ಜಯಚಂದ್ರನ ಬಳಿಗೆ ತನ್ನ ಸರದಾರನಾದ ಕೈಮಾಷನನ್ನು ಕಳುಹಿಸಿದನು. ಅವನು ಕನೋಜಕ್ಕೆ ಬಂದು ಪೃಥ್ವೀರಾಜನ ಪತ್ರವನ್ನು ಓಲಗದಲ್ಲಿ ಜಯಚಂದ್ರನಿಗೆ ಕೊಟ್ಟನು. ಅವನು ಆ ಪತ್ರವನ್ನೋದಿದ ಕೂಡಲೆ ಅತಿಶಯ ಸಂತಪ್ತನಾದನು.

"ಕೈಮಾಷ, ನಿಮ್ಮ ಒಡೆಯನಾದ ಪೃಥ್ವಿಯು ಉನ್ಮತ್ತವಾಗಿ ಹೀಗೆ ಬರೆದಿರುವನು. ಅವನನ್ನು ನಾನು ಅಧಿರಾಜನೆಂದು ತಿಳಿದಿದ್ದರೆ ಕಾಣಿಕೆಯನ್ನೊಪ್ಪಿಸಬಹುದಾಗಿತ್ತು. ಕೈಮಾಷ, ನಿನ್ನ ಒಡೆಯನಿಗೆ ನನ್ನ ಸಂದೇಶವನ್ನು ಹೀಗೆ ಹೇಳು: ನಾನು ಹಿರಿಯನಾಗಿರುವದರಿಂದ ಸಾರ್ವಭೌಮಪದದ ಅಧಿಕಾರವು ನನಗಿರುವದು; ಆದ್ದರಿಂದ ಇನ್ನು ಮೇಲೆ ಕಾಣಿಕೆಯನ್ನು ನೀನೇ ನನಗೆ ಕೊಡತಕ್ಕದ್ದು! ನಾನು

ಬೇಗನೆ ಪ್ರಾರಂಭಿಸಬಹುದಾದ ರಾಜಸೂಯ ಯಾಗದಲ್ಲಿ ಆವನು ಬಂದು ನನ್ನ ಸಾರ್ವಭೌಮತ್ವವನ್ನೊಪ್ಪಿದರೆ ಸ್ನೇಹವು ಉಳಿಯುವದು; ಇಲ್ಲದಿದ್ದರೆ ಮಾತ್ರ ವಿಪರೀತ ಪ್ರಸಂಗವೊದಗುವದೆಂದು ತಿಳಿಸು." ಎಂದು ಜಯಚಂದ್ರನು ನುಡಿದು, ಪೃಥ್ವೀರಾಜನ ಪತ್ರವನ್ನು ಬಿಸುಟ:—"ದಿಲ್ಲಿಯ ಸಿಂಹಾಸನದಲ್ಲಿ ಒಂದು ಇಲಿಯು ಕುಳಿತರೆ ಅದಕ್ಕೂ ಕಪ್ಪು ಕಾಣಿಕೆಯ ಲಾಲಸೆಯುಂಟಾಗಬೇಕೆ?"

ಜಯಚಂದ್ರನ ಈ ವರ್ತನವು ಕೈಮಾಷನಿಗೆ ಸರಿದೋರಲಿಲ್ಲ. ಪೃಥ್ವೀರಾಜನಂತಹ ನರಶಾರ್ದೂಲನನ್ನು ನಿಂದಿಸಿದ್ದರಿಂದ, ಅವನು ಜಯಚಂದ್ರನ ವಿಷಯಕ್ಕೆ ತಿರಸ್ಕಾರಭಾವನೆಯುಳ್ಳವನಾದನು. ಕ್ಷುದ್ರಭಾವದಿಂದಲೂ ಮಾತ್ಸರ್ಯದಿಂದಲೂ ಜಯಚಂದ್ರನ ಮನಸ್ಸು ತೀರ ಕಲುಷಿತವಾಗಿರುವದೆಂಬದನ್ನು ಅವನು ಕಂಡು ಹಿಡಿದನು. ಅವನು ಜಯಚಂದ್ರನನ್ನು ಕುರಿತು ಸಂತಪ್ತಹೃದಯದಿಂದ,

"ಮಹಾರಾಜರೆ, ಪೃಥ್ವೀರಾಜ ಸಾರ್ವಭೌಮರಿಗೆ ನೀವು ಕಪ್ಪ-ಕಾಣಿಕೆಗಳನ್ನು ಕೊಡುವದು ಸಯುಕ್ತಿಕವಾದ ಮಾತಾಗಿರುವದು; ಹೀಗಿದ್ದು ಅವರಿಂದ ಕಾಣಿಕೆಯನ್ನಪೇಕ್ಷಿಸುವದು ಹಾಸ್ಯಾಸ್ಪದವಲ್ಲವೆ? ಸಾರ್ವಭೌಮರು ಮಾಂಡಲಿಕರನ್ನು ತಮ್ಮ ಸಾರ್ವಭೌಮರೆಂದು ಒಪ್ಪಬೇಕೆ? ಹಾಗೆ ಮಾಡದಿದ್ದರೆ ವಿಪರೀತ ಪ್ರಸಂಗವೊದಗುವದೆ? ಒಳ್ಳೆಯ ವಿಚಾರವಿದು! ನೀವು ಸಮ್ರಾಟರ ವಿಷಯಕ್ಕೆ ಮಾತ್ಸರ್ಯವನ್ನು ತಳೆದಿರುವದರಿಂದ, ಮನಬಂದಂತೆ ಮಾತನಾಡುವಿರಿ ಇದರ ಪರ್ಯವಸಾನವು ಒಳಿತಿನಲ್ಲಾಗಲಾರದೆಂದು ನಾನು ನಿಶ್ಚಯಪೂರ್ವಕವಾಗಿ ಹೇಳುವೆನು."

"ಅದಕ್ಕೆ ನಾನು ಸಿದ್ಧನೇ ಇರುವೆನು. ಕೈಮಾಷ, ಪೃಥ್ವಿಯಂತಹ ಕ್ಷುದ್ರನಿಗೆ ಹೆದರಿ ಅಳ್ಳೊಡೆಯುವಂತಹ ಹೇಡಿಯು ನಾನಿಲ್ಲ. ಕೃತಘ್ನನಾದ ನಿನ್ನ ರಾಜನಿಗೆ ನೆರವಾದದ್ದು ನನ್ನ ತಪ್ಪಾಗಿರುವದು."

"ನೀವು ನಮ್ಮ ಮಹಾರಾಜರಿಗೆ ಯಾವ ಬಗೆಯ ಸಹಾಯ ಮಾಡಿದಿರಿ!"

"ನಿನಗೆ ಗೊತ್ತಿಲ್ಲವೇ? ಅಂತೆಯೇ ನಿಮ್ಮನ್ನು ಕೃತಘ್ನರೆನ್ನಬೇಕಾಗಿದೆ. ಶಹಾಬುದ್ದೀನನು ನಿಮ್ಮ ಅರಸನ ಮೇಲೆ ದಂಡೆತ್ತಿ ಬಂದಾಗ ನಾನು ನನ್ನ ಎಲ್ಲ ಬಲವನ್ನು ತೆಗೆದುಕೊಂಡು ಬಂದು ಸಹಾಯ ಮಾಡಲಿಲ್ಲವೆ? ನನ್ನ ನೆರವು ನಿಮ್ಮ ದೊರೆಯ ವಿಜಯಕ್ಕೆ ಕಾರಣೀಭೂತವಾಗಲಿಲ್ಲವೆ?"

ಓಹೋ! ಬಹಳೇ ಉಪಕೃತಿಯಾಯಿತು! ನೀವು ಮಾಡಿದ ಉಪಕಾರಕ್ಕಾಗಿ ನಿಮಗೆ ದಿಲ್ಲಿಯ ಸಾಮ್ರಾಜ್ಯವನ್ನೇ ಪಾರಿತೋಷಕವೆಂದು ಕೊಡಬೇಕಾಗಿತ್ತಲ್ಲವೆ? ದೊರೆಗಳೆ, ಅದಕ್ಕಾಗಿಯೇ ನೀವು ಕಾಣಿಕೆಯನ್ನು ಕೊಡುವದಕ್ಕೆ ಒಪ್ಪುವದಿಲ್ಲ

ವೇನು?" ಎಂದು ತಿರಸ್ಕಾರದಿಂದ ನುಡಿದು, ಸಿಟ್ಟಿನಿಂದ ಕೈಮಾಷನು:—"ಕೇವಲ ದಿಲ್ಲಿಯ ಹಿತಕ್ಕಾಗಿಯೇ ತಿರೋರಿಯ ಸಂಗ್ರಾಮವಾಯಿತೆಂದು ತಿಳಿದಿರುವಿರೇನು? ಶಹಾಬುದ್ದೀನನೊಡನೆ ಕಾದಿದ್ದು ಸ್ವದೇಶಹಿತಕ್ಕಾಗಿ! ಅಖಿಲ ಭಾರತಭೂಮಿಯ ಕಂಟಕ ನಿವಾರಣೆಗಾಗಿ! ಸ್ವಧರ್ಮರಕ್ಷಣೆಗಾಗಿ! ಎಲ್ಲ ಹಿಂದುರಾಜರು ಒಂದಾಗಿ ಪರಕೀಯ ಶತ್ರುಗಳ ದಾಳಿಗಳನ್ನು ನಿವಾರಿಸದಿದ್ದರೆ ನೀವು ಕನೋಜದ ಸಿಂಹಾಸನದ ಮೇಲೆ ಉಳಿಯುವಿರೇನು? ನಮ್ಮಲ್ಲಿ ಅನೇಕ ಬಗೆಯ ಪಂಗಡಗಳಿದ್ದರೂ, ಅನೇಕ ಪ್ರಕಾರದ ಒಳಜಗಳಗಳಿದ್ದರೂ ಅವೆಲ್ಲವನ್ನೂ ಬದಿಗಿರಿಸಿ, ಎಲ್ಲರೂ ಒಕ್ಕಟ್ಟಾಗಿ ವೈರಿಗಳೊಡನೆ ಹೋರಾಡದಿದ್ದರೆ, ಹಿಂದು ದೊರೆಗಳ ಅಸ್ತಿತ್ವವು "ಭರತಭೂಮಿಯಲ್ಲಿ ಉಳಿಯುವವೆ? ಹಾಗೆ ತಿಳಿದಿದ್ದರೆ ಅದು ನಿಮ್ಮ ದಡ್ಡತನವೇ ಸರಿ!"

"ಕೈಮಾಷ, ನೀನು ನನಗೆ ಬ್ರಹ್ಮಜ್ಞಾನವನ್ನು ಹೇಳುವ ಕಾರಣವಿಲ್ಲ. ನಿನ್ನ ಒಡೆಯನು ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ರಾಜಸೂಯ ಯಾಗಕ್ಕೆ ಬಂದರೆ ಒಳಿತಾಗುವದು; ಇಲ್ಲದಿದ್ದರೆ ಮಾತ್ರ ಪ್ರಸಂಗವು ಕಠಿಣವಾಗುವದು."

"ನನಗೇನೂ ಹೆಚ್ಚಿಗೆ ತಿಳಿಯದು. ನೀವು ಹೇಳಿದಂತೆ ಮಹಾರಾಜರಿಗೆ ತಿಳಿಸುತ್ತೇನೆ." ಎಂದು ಕೈಮಾಷನು ಬೇಸರದಿಂದ ನುಡಿದನು. ಆಗ ಜಯಚಂದ್ರನು ತನ್ನ ಮಂತ್ರಿಯಾದ ವಿಜಯಸಿಂಹನನ್ನು ಕುರಿತು:—

"ರಾಜಸೂಯಯಾಗಕ್ಕೆ ಬರುವದಕ್ಕಾಗಿ ಪೃಥ್ವಿಗೆ ಪತ್ರಬರೆಯಬೇಕೆಂದು ಕರಣೀಕನಿಗೆ ಆಜ್ಞಾಪಿಸಿರಿ." ಎಂದು ಜಯಚಂದ್ರನು ನುಡಿದು:—

"ಚಿತೋಡದ ರಾಣಾ ಸಮರಸಿಂಹನನ್ನಾದರೂ ಕರೆದುಕೊಂಡು ಬರುವಂತೆ ಅದೇ ಪತ್ರದಲ್ಲಿ ತಿಳಿಸತಕ್ಕದ್ದು."

"ಮಹಾರಾಜರೆ, ನಾನು ಇಲ್ಲಿಗೆ ಯಾವ ಕೆಲಸಕ್ಕಾಗಿ ಬಂದಿರುವೆನೆಂಬದರ ಅರಿವು ನಿಮಗಿದ್ದಂತೆಯೇ ತೋರುವದಿಲ್ಲ. ವ್ಯರ್ಥವಾಗಿ ಗೊಂದಲವೆಬ್ಬಿಸಬೇಡಿರಿ. ಪರಧರ್ಮೀಯರ ದಾಳಿಗಳು ನಮ್ಮ ದೇಶದ ಮೇಲೆ ಮೇಲಿಂದಮೇಲೆ ಬರುವ ಲಕ್ಷಣವು ತೋರುತ್ತಲಿರುವೀ ಸಮಯದಲ್ಲಿ ಗೃಹಕಲಹದ ಬೆಂಕಿಯನ್ನು ಹೊತ್ತಿಸಬೇಡಿರಿ. ಹೊತ್ತುವ ದ್ವೇಷಾಗ್ನಿಯನ್ನು ಶಾಂತಗೊಳಿಸಿರಿ. ಪೃಥ್ವೀರಾಜ ಸಾರ್ವಭೌಮರು ನಿಮಗಿಂತ ಚಿಕ್ಕವರೆಂದು ಅವರ ಮಾನ-ಮರ್ಯಾದೆಗಳನ್ನು ನೀವು ಯಾವ ರೀತಿಯಿಂದಲಾದರೂ ಉಳಿಸುವಂತಿಲ್ಲ. ನೀವು ಒಳ್ಳೆಯ ಮಾತಿನಿಂದ ಅವರ ಮರ್ಯಾದೆಗೆ ಸರಿಯಾಗಿ ಕಾಣಿಕೆಯಿತ್ತು, ಸ್ನೇಹವನ್ನು ಕಾಯ್ದುಕೊಳ್ಳುವದರಲ್ಲಿಯೇ ಜಾಣತನವಿರುವದೆಂದು ಸಾರ್ವಭೌಮರು ನಿಮಗೆ ಕೊನೆಯ ಸಂದೇಶವನ್ನರುಹತಕ್ಕದ್ದೆಂದು ಹೇಳಿರುವರು."

"ಅಂತೂ ಪೃಥ್ವಿಯು ತೋಳತಿಂಡೆಯನ್ನು ಕಡಿಮೆಮಾಡಿಕೊಳ್ಳಬೇಕಾಗಿರುವದೇನು? ಆಗಲಿ. ಅವನ ಗರ್ವಭಂಗಮಾಡುವದಕ್ಕೆ ನನ್ನ ಸೇನಾಬಲವು ಸಿದ್ಧವೇ ಇದೆ. ಇದೇ ನನ್ನ ಹೇಳಿಕೆ. ಕೈಮಾಷ, ನಿನ್ನ ಒಡೆಯನಿಗೆ ಇದರಂತೆಯೇ ಹೇಳು."

ಜಯಚಂದ್ರನು ಹೀಗೆ ನುಡಿದ ಕೂಡಲೆ ಕೈಮಾಷನು ಪ್ರತ್ಯುತ್ತರವಾಗಿ ಏನೂ ಮಾತನಾಡದೆ ಅಲ್ಲಿಂದ ಹೊರಟು ದಿಲ್ಲಿಯ ದಾರಿ ಹಿಡಿದನು. ಅವನು ಹೋದ ಮೇಲೆ ಜಯಚಂದ್ರನು ತನ್ನ ಮಂತ್ರಿ-ಸೇನಾಪತಿಗಳನ್ನು ಕುರಿತು:—

"ಪೃಥ್ವಿಯು ಮದೋನ್ಮತ್ತನಾಗಿರುವನು. ರಾಜಸೂಯಯಾಗದಲ್ಲಿ ಅವನು ನಮಗೆ ಕಾಣಿಕೆಯಿತ್ತು ಸಾರ್ವಭೌಮತ್ವವನ್ನು ಒಪ್ಪಿಕೊಳ್ಳದಿದ್ದರೆ, ನಾವು ಅವನ ಮೇಲೆ ದಂಡೆತ್ತಿ ಹೋಗಬೇಕಾಗುವದು."

"ಹಾಗೆ ಮಾಡದಿದ್ದರೆ ಅವನು ಮೈಮೇಲೆ ಬರುವದು ನಿಜ" ಎಂದು ಮಂತ್ರಿಯಾದ ವಿಜಯಸಿಂಹನು ಅಭಿಪ್ರಾಯವಿತ್ತನು.

"ಮಹಾರಾಜರೆ, ನಾವು ಹೇಡಿಗಳಿರುವೆವೆಂದು ಪೃಥ್ವೀರಾಜನು ತಿಳಿದುಕೊಂಡಂತೆ ತೋರುವದು. ಅವನಿಗೊಮ್ಮೆ ನಮ್ಮ ಕೈಯನ್ನು ಚನ್ನಾಗಿ ತೋರಿಸಲೇಬೇಕು." ಎಂದು ಅವನ ಇನ್ನೊಬ್ಬ ಸೇನಾಪತಿಯಾದ ತೇಜಸಿಂಹನು ನುಡಿದನು. ಕಹರ ಕಂಠೀರವನೂ ಇದೇ ರೀತಿಯಾಗಿ ಹೇಳಿದನು. ಹೀಗಾದ ಮೇಲೆ ಜಯಚಂದ್ರನ ತಾಂಡವ ನೃತ್ಯವು ಪ್ರಾರಂಭವಾಗದಿರುವದೆ?

ರಾಜಸೂಯಯಾಗವು ತೀರ ಸಮೀಪಕ್ಕೆ ಬಂದುದರಿಂದ ಎಲ್ಲ ರಾಜರಿಗೂ ನಿಮಂತ್ರಣ ಪತ್ರಿಕೆಗಳು ಬರೆಯಲ್ಪಟ್ಟವು. ಪೃಥ್ವೀರಾಜನೂ ಒಬ್ಬ ಮಾಂಡಲಿಕ ಅರಸನೆಂದು ತಿಳಿದು ಆದರಂತೆ ಜಯಚಂದ್ರನು ಅವನಿಗೂ ಪತ್ರ ಬರೆಯಿಸಿದನು. ಅದೇ ಪತ್ರದಲ್ಲಿಯೇ ಅವನ ಮೈದುನನಾದ ಚಿತೋಡದ ರಾಣಾ ಸಮರಸಿಂಹನನ್ನೂ ಕರೆದುಕೊಂಡು ಬರುವದಕ್ಕಾಗಿ ತಿಳಿಸಲ್ಪಟ್ಟಿತು.

ರಾಜ್ಯದಲ್ಲಿ ನಿಸ್ಪೃಹವೃತ್ತಿಯ ಮಂತ್ರಿ ಸೇನಾನಾಯಕರಿದ್ದರೇನೇ ಸುವ್ಯವಸ್ಥೆಯು ನೆಲೆಗೊಳ್ಳುವದು. ಅರಸನ ಲಹರಿಯಂತೆ ಬೆನ್ನುಹತ್ತುವ ಅಧಿಕಾರಿಗಳು ನಿಜವಾಗಿಯೂ ರಾಜ್ಯದಲ್ಲಿ ವಿಘಾತವನ್ನುಂಟು ಮಾಡುವರು. ಅರಸನ ಸಲ್ಲದ ಆಚರಣೆ ಗಳನ್ನು ಅಲ್ಲಗಳೆಯುವದಕ್ಕೆ ಹಿಂದುಮುಂದೆ ನೋಡುವ ಕಾರ್ಯಕರ್ತರು ನಿರುಪಯೋಗಿಗಳೆಂಬದಿಷ್ಟೇ ಅಲ್ಲ; ಅವರು ಸರ್ವ ನಾಶಕರೇ ಆಗುವರು. ಈಗ ಕನ್ಯಕುಬ್ಜರಾಜ್ಯದ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಜಯಚಂದ್ರನ ಮನಸ್ಸಿನೊಳಗಿನ ಹೊತ್ತುತ್ತಿರುವ ಮಾತ್ಸರ್ಯಾಗ್ನಿಯನ್ನು ಶಾಂತಪಡಿಸುವದಕ್ಕೆ ಒಬ್ಬ ಕಾರ್ಯಕರ್ತನಾದರೂ ಮುಂದುವರಿಯಲಿಲ್ಲ. ಮತ್ತಿಷ್ಟು ಸೊಪ್ಪು-ಸೆದೆಗಳನ್ನು

ಹಾಕಿ ಹೊತ್ತುತ್ತಿರುವ ಬೆಂಕಿಯನ್ನು ಮನ್ನಿಷ್ಟು ಪ್ರಜ್ವಲಗೊಳಿಸುವ ಕಾರ್ಯವನ್ನು ಅವರು ಮಾಡತೊಡಗಿದರು.

ಅಸೂಯಾಪರನಾಗಿ ಪ್ರಾರಂಭಿಸಿದ ಜಯಚಂದ್ರನ ರಾಜಸೂಯ ಯಾಗವು ಗೃಹಕಲಹಾಗ್ನಿಯನ್ನು ಹೊತ್ತಿಸುವವಕ್ಕೆ ಕಾರಣವಾಯಿತು. ಸಂಯುಕ್ತೆಯ ಸ್ವಯಂವರವು ಹೊತ್ತುವ ಬೆಂಕಿಯನ್ನು ಪ್ರಜ್ವಲಗೊಳಿಸುವವಕ್ಕೆ ಹೇಗೆ ಕಾರಣವಾಯಿತೆಂಬದನ್ನೂ ಅದರಿಂದ ಭಾರತೀಯರ ಸ್ವಾತಂತ್ರ್ಯ ಸೂರ್ಯನು ಹೇಗೆ ಅಸ್ತಂಗತನಾದನೆಂಬವನ್ನೂ ಪ್ರಸಂಗಾನುಸಾರವಾಗಿ ನೋಡಬಹುದು.

• ಒಳಜಗಳವೆಂಬ ಹೊತ್ತುವ ಬೆಂಕಿಯು ಸರ್ವನಾಶ ಮಾಡದಿರುವದೆ?

—— 

ದಿಲ್ಲಿಯ ಆರ್ಯ ಸಮ್ರಾಟ್ ಪೃಥ್ವೀರಾಜನ ಓಲಗವು ಇಂದು ವಿಲಕ್ಷಣವಾಗಿ ಶೋಭೆಗೊಂಡಿತ್ತು. ಜನಸಂದಣಿಯು ಹೆಚ್ಚಾಗಿ ಕೂಡಿದ್ದರೂ ಎಲ್ಲ ಕಡೆಯಲ್ಲಿ ಶಾಂತತೆಯು ನೆಲೆಗೊಂಡಿತ್ತು. ಆಗಾಗ್ಗೆ ಹಿಂದುದೇಶದ ಮೇಲೆ ದಾಳಿಯನ್ನು ಮಾಡುವ ಶಹಾ ವಿಶ್ವಧರ್ಮ ಬುದ್ದೀನ ಘೋರಿಯು ಪೃಥ್ವೀರಾಜನಿಂದ ಮತ್ತೊಮ್ಮೆ ಪರಾ ಭೂತನಾದುದರಿಂದ, ಅವನು ಓರ್ವ ಅಪರಾಧಿಯಂತೆ ಓಲಗ ಮಧ್ಯದಲ್ಲಿ ನಿಲ್ಲಿಸಲ್ಪಟ್ಟಿದ್ದನು. ಚವ್ಹಾಣ ಕೇಸರಿಯಾದ ಪೃಥ್ವೀರಾಜನು ಸಿಂಹಾಸನದಲ್ಲಿ ವಿರಾಜಮಾನನಾಗಿದ್ದನು. ಮಂತ್ರಿ-ಸಾಮಂತಾದಿಗಳೂ, ಸರದಾರ-ಸೇನಾಪತಿಗಳೂ ತಮ್ಮ ತಮ್ಮ ಸ್ಥಳಗಳಲ್ಲಿ ಮಂಡಿಸಿದ್ದರು. ಉದ್ದಾಮ ಸುಲ್ತಾನನಾದ ಶಹಾಬುದ್ದೀನನಿಗೆ ಯಾವ ವಿಧವಾದ ಶಾಸನವು ವಿಧಿಸಲ್ಪಡುವದೆಂಬದನ್ನು ತಿಳಿದುಕೊಳ್ಳುವದಕ್ಕೆ ಸರ್ವರೂ ಉತ್ಕಂಠಿತರಾಗಿದ್ದರು.

ರಾಜ್ಯಲೋಭಾಕೃಷ್ಟನಾದ ಶಹಾಬುದ್ದೀನನು ಪೃಥ್ವೀರಾಜನನ್ನು ಪರಾಭವಗೊಳಿಸಬೇಕೆಂದು ಮಹತ್ವಾಕಾಂಕ್ಷೆಯನ್ನು ತಾಳಿ, ಅವನ ಮೇಲೆ ದಂಡೆತ್ತಿ ಬಂದನು. ಜಯಚಂದ್ರನು ಈ ಸಾರೆ ಅಂತರಂಗದಲ್ಲಿ ಶಹಾಬುದ್ದೀನನಿಗೆ ಅನುಕೂಲನಿದ್ದರೂ ಪೃಥ್ವೀರಾಜನ ವಿರುದ್ಧವಾಗಿ ಬಹಿರಂಗದಲ್ಲಿ ಅವನಿಗೆ ನೆರವಾಗಲು ಸಿದ್ಧನಾಗಿರಲಿಲ್ಲ. ಅವನು ತಟಸ್ಥ ವೃತ್ತಿಯನ್ನು ಕೈಕೊಂಡಿದ್ದನೆಂದರೂ ಸಲ್ಲುವದು. ಈ ಸಾರೆಯ ಯುದ್ಧದಲ್ಲಿ ಘೋರಿಯು ಪೃಥ್ವೀರಾಜನಿಂದ ಪರಾಭೂತನಾಗಿ ಕೈಸೆರೆ ಸಿಕ್ಕನು. ಪೃಥ್ವೀರಾಜನು ಕ್ಷಾತ್ರಧರ್ಮಕ್ಕನುಸಾರವಾಗಿ ಅವನನ್ನು ಯಾವ ಬಗೆಯಿಂದಲೂ ಅಪಮಾನಗೊಳಿಸದೆ, ಓಲಗಕ್ಕೆ ಕರೆಸಿಕೊಂಡಿದ್ದನು. ಘೋರಿಯನ್ನು ತೊಂದರೆಪಡಿಸಿಯಾಗಲಿ, ಆಮರಣ ಕಾರಾಗೃಹದಲ್ಲಿರಿಸಿಯಾಗಲಿ ಇಲ್ಲವೆ ಅವನನ್ನು ಕೊಲೆ ಮಾಡಿಸಿಯಾಗಲಿ ಭಾರತದ ಕಂಟಕ ನಿವಾರಣೆಮಾಡುವದು ಪೃಥ್ವೀರಾಜನಿಗೆ ಅಸಾಧ್ಯವಿರಲಿಲ್ಲ. ಅವನು ವಿಶ್ವಕೌಟುಂಬಿಕ ಧರ್ಮವನ್ನು ಬಲ್ಲವನಾಗಿದ್ದನು;

ಸಮತಾಬುದ್ಧಿಯವನಿದ್ದನು; ನಿಜವಾದ ಆರ್ಯ ಸಮ್ರಾಟನಿದ್ದನು. ಘೋರಿಯು ದಾಗಲಿ, ಅವನ ದೇಶದ್ದಾಗಲಿ, ಅವನ ಜನಾಂಗದ್ದಾಗಲಿ ವಿಟಂಬನೆಮಾಡಿ ದ್ವೇಷ ವನ್ನುಂಟು ಮಾಡುವದಕ್ಕಿಂತ ಅವನನ್ನು ಸಾಮೋಪಾಯದಿಂದ ಹಾದಿಗೆ ತರಬೇ ಕೆಂದು ಪೃಥ್ವೀರಾಜನು ಯೋಚಿಸಿದ್ದನು; ಅದಕ್ಕಾಗಿಯೇ ಅವನು ಘೋರಿಯನ್ನು ಓಲಗಕ್ಕೆ ಕರೆಯಿಸಿದ್ದನು.

ಶಹಾಬುದ್ದೀನ ಘೋರಿಯು ಓಲಗದಲ್ಲಿ ತಲೆಬಾಗಿ ನಿಂತಿದ್ದನು. ಇಂದು ತನ್ನ ಅಂತ್ಯಕಾಲವೇ ಒದಗಿತೆಂದು ಅವನು ಭಾವಿಸಿದ್ದನು. ಸ್ವಜನರು, ಸ್ವದೇಶ ಮೊದ ಲಾದವುಗಳಿಗೆ ಎರವಾಗಿ, ಕಾಫರರಿಂದ ಮರಣವೊದಗುವ ಪ್ರಸಂಗ ಬಂದಿತೆಂದು ಅವನು ಪಶ್ಚಾತ್ತಾಪಪಡತೊಡಗಿದನು. “ ಹಾಯ! ನನ್ನ ಜನ್ಮ ಭೂಮಿಯು ಎಲ್ಲಿ ಉಳಿಯಿತು? ನನ್ನ ರಾಜ್ಯವೆಲ್ಲಿ? ನನ್ನ ಸಿಂಹಾಸನವೆಲ್ಲಿ? ನನ್ನನ್ನು ಕಾಪಾಡುವ ಸೇನೆಯು, ಸೇನಾಪತಿಗಳು ಎಲ್ಲಿ? ಅಂಗರಕ್ಷಕರೆಲ್ಲಿ? ನಾನು ಸರ್ವಸ್ವಕ್ಕೂ ಎರವಾಗಿ ಒಬ್ಬ ಅಪರಾಧಿಯಂತೆ ಕಾಫರರಾಜನ ಕೈಯಲ್ಲಿ ಸಿಲುಕಿ ದಂಡನೆಯನ್ನು ಹೊಂದ ಬೇಕಾಯಿತಲ್ಲ! ನಾನು ನಿಜವಾದ ದುರ್ದೈವಿಯು! ಮರಣೋತ್ತರದಲ್ಲಿ ನನ್ನ ಜಡ ದೇಹವನ್ನು ಕಬರಸ್ಥಾನದಲ್ಲಿರಿಸುವವರು ಸಹ ದೊರೆಯಲಿಲ್ಲವಲ್ಲ! ಈ ಶರೀರವು ಹದ್ದು-ನಾಯಿಗಳ ಭಕ್ಷ್ಯಸ್ಥಾನಕ್ಕೆ ಹೋಗುವದೇ ನಿಜವು! ಹಾಯ್! ಹಾಯ್! ನಾನು ನಿಜವಾಗಿ ದೈವಹತನು! ಅರೇ ಅಲ್ಲಾ! ಏ ಕ್ಯಾ ಕರೇ? ಎಂದು ಅವನು ಮನ ದಲ್ಲಿ ತಳಮಳಿಸತೊಡಗಿದನು. ಇಹಸೌಖ್ಯದ ಆಶಾತಂತುಗಳೆಲ್ಲ ತೊಲಗಿಹೋಗಿದ್ದ ಶಹಾಬುದ್ದೀನನು ಮನದಲ್ಲಿ ಕುದಿಯತೊಡಗಿದ್ದನು. ಆ ಮಹತ್ವಾಕಾಂಕ್ಷೆಯುಳ್ಳ ತಾರ್ತರರಾಜನ ಮನಃಸ್ಥಿತಿಯು ಈಗ ಹೇಗಾಗಿರಬಹುದೆಂಬದನ್ನು ಯಥಾರ್ಥವಾದ ರೀತಿಯಿಂಧ ಹೇಳುವದು ಅಸಾಧ್ಯವೇ ಸರಿ.

ಶಹಾಬುದ್ದೀನನು ಇದೇ ಆಯುಷ್ಯದ ಅಂತ್ಯದಿನವೆಂದು ತಿಳಿದು, ಅಲ್ಲಾನ ಸ್ಮರಣೆಮಾಡತೊಡಗಿದ್ದನು. ದೀನವದನನಾಗಿ ನಿಂತಿದ್ದ ಘೋರಿಯನ್ನು ನೋಡಿ ಪೃಥ್ವೀರಾಜನ ಹಿಂದೂಹೃದಯವು ಕರಗಿತು. ಆರ್ಯರಲ್ಲಿ ಸದೈವ ಜಾಗ್ರತವಾಗಿ ರುತ್ತಿದ್ದ ದಯೆ, ಪರೋಪಕಾರ, ಸಮತಾಬುದ್ಧಿ, ವಿಶ್ವಧರ್ಮ ಮೊದಲಾದ ಗುಣಗಳು ಈಗ ಪೃಥ್ವೀರಾಜನಲ್ಲಿ ಮತ್ತಿಷ್ಟು ಉದ್ದೀಪಿತವಾದವು. ಅವನು ಘೋರಿಯ ವಿಷ ಯವಾಗಿ ಶತ್ರುಭಾವವನ್ನು ತ್ಯಜಿಸಿ, ಆವನನ್ನು ತನ್ನ ಸ್ನೇಹಿತನೆಂದು ಭಾವಿಸಿದ್ದನು. ಅವನು ಆಗ ಆತನನ್ನು ಕುರಿತು:—

“ ಶಹಾಬುದಿದ್ದೀನಶಹರೆ, ನೀವು ಮುಸಲಮಾನರಿದ್ದರೂ, ಸದ್ಯಕ್ಕೆ ನನ್ನ ಸೆರೆ ಯಾಳಾಗಿದ್ದರೂ, ನಿಮ್ಮನ್ನು ನನ್ನ ಪರಮ ಸ್ನೇಹಿತರೆಂದು ತಿಳಿದುಕೊಳ್ಳುವೆನು.

ಆರ್ಯರಾದ ನಾವು ವೀರರ ಪೂಜೆ ಮಾಡುವೆವು. ದುರ್ಭಾಗ್ಯದಿಂದ ನೀವು ಪರಾಜಿತರಾಗಿರುವಿರೆಂದು ನಾನು ನಿಮ್ಮನ್ನು ಉಪಮರ್ದಿಸಲಾರೆನು. ಜಯಾಪಜಯಗಳು ದೈವಾಧೀನವಾದವುಗಳು. ಯುದ್ಧ ಸಮಾಪ್ತಿಯಾದಮೇಲೆ ಪರಾಭೂತ ಶತ್ರುಗಳನ್ನು ಮಿತ್ರತ್ವ ಶೃಂಖಲೆಯಿಂದ ಬಂಧಿಸಬೇಕೆಂದು ನಮ್ಮ ಸನಾತನ ಧರ್ಮ ತತ್ವವಿರುವದು. ತಾರ್ತರರಾಜರೇ, ನೀವು ಪರಾಜಿತರಾದಿರೆಂದು ನಿಮ್ಮ ಛಲನೆ ಮಾಡಬೇಕೆಂದು ನಾನಿಚ್ಛಿಸುವದಿಲ್ಲ. ನಾನು ಈಗ ನಿಮ್ಮನ್ನು ಉಪಮರ್ದಿಸಿದರೆ, ದ್ವೇಷಾಗ್ನಿಯನ್ನು ಪ್ರಜ್ವಲಿಸಿ ವಿಶ್ವದ್ರೋಹಚಿಂತನೆ ಮಾಡಿದಂತಾಗುವದು. ತಮ್ಮ ತಮ್ಮ ಅಧಿಕಾರ ಸ್ವಾತಂತ್ರ್ಯಗಳನ್ನು ಅವರವರು ಉಪಭೋಗಿಸುತ್ತ, ಎಲ್ಲರೂ ಸೌಖ್ಯದಿಂದ ಜೀವಿಸಬೇಕೆನ್ನುವ ವಿಶ್ವಧರ್ಮವನ್ನು ನಾನು ಬಲ್ಲವನಾಗಿರುವೆನು. ಅನ್ಯರ ಸ್ವತ್ತಿಗಾಗಿ ದುರಾಕಾಂಕ್ಷೆಯನ್ನು ತಾಳಿ, ನೆತ್ತರದ ಕಾಲುವೆಯನ್ನು ಹರಿಸಬೇಕೆನ್ನುವ ಜನರನ್ನು ನಾನು ಬುದ್ಧಿಪೂರ್ವಕವಾಗಿ ದ್ವೇಷಿಸುತ್ತಿರುವೆನು. ಈಶ್ವರೀಸೃಷ್ಟಿಯಲ್ಲಿ ಸರ್ವರೂ ಸಮತ್ವದಿಂದಿರಬೇಕೆಂದೂ, ಪರಸ್ಪರರು ಸಹಾನುಭೂತಿಯುಳ್ಳವರಾಗಿರಬೇಕೆಂದೂ, ಅವರವರ ಸ್ವತ್ತುಗಳಿಗೆ ಅವರವರೇ ಬಾಧ್ಯಸ್ಥರಾಗಿದ್ದು ಅನ್ಯಾಕ್ರಾಂತ ಪದ್ಧತಿಯು ನಿರ್ಮೂಲವಾಗಬೇಕೆಂದೂ ನಾನು ಇಚ್ಛೆಯುಳ್ಳವನಿರುವೆನು. ಯವನ ವೀರರೆ, ನಾನು ನಿಮಗೆ ಯಾವ ರೀತಿಯಿಂದಲಾದರೂ ತೊಂದರೆಕೊಡಬೇಕೆಂದು ಯತ್ನಿಸುವದಿಲ್ಲ. ಕಡೆತನಕ ಸ್ನೇಹದಿಂದಿದ್ದು, ದೇಶದಲ್ಲಿ ಶಾಂತತೆ-ಸ್ವಾನಂದಗಳನ್ನು ನೆಲೆಗೊಳಿಸುವದಕ್ಕೆ ಯತ್ನಿಸಬೇಕೆಂದು ಸವಿನಯ ಬೇಡಿಕೊಳ್ಳುವೆನು."

ಪೃಥ್ವೀರಾಜನ ಈ ಮಾತುಗಳನ್ನು ಕೇಳಿ ಓಲಗದ ಜನರು ಆಶ್ಚರ್ಯಚಕಿತರಾದರು. ರಾಜ್ಯಲೋಭದಿಂದಲೂ, ಧರ್ಮಪ್ರಸಾರದ ದುರಾಕಾಂಕ್ಷೆಯಿಂದಲೂ ಹಿಂದಭೂಮಿಯಲ್ಲಿ ನೆತ್ತರದ ಕಾಲುವೆಗಳನ್ನು ಹರಿಸಿ, ಹಿಂದುಗಳನ್ನು ಅನೇಕ ವಿಧವಾಗಿ ಹಿಂಸೆಪಡಿಸಿದ್ದ ಶಹಾಬುದ್ದೀನನಿಗೆ ಮರಣದಂಡನೆಯೇ ವಿಧಿಸಲ್ಪಡುವದೆಂದು ಎಲ್ಲರೂ ಭಾವಿಸಿದ್ದರು. ಅದಕ್ಕೆ ವಿಪರೀತವಾಗಿ ಆರ್ಯ ಸಮ್ರಾಟನು ವೈರಿಯಲ್ಲಿ ಸ್ನೇಹದ ಯಾಚನೆ ಮಾಡಿದ್ದನ್ನು ನೋಡಿ ಯಾರಿಗೆ ವಿಸ್ಮಯವೆನಿಸಲಿಕ್ಕಿಲ್ಲ? ಎಲ್ಲ ಜನರೂ ಸ್ತಬ್ಧರಾಗಿ ಪೃಥ್ವೀರಾಜನನ್ನು ನೋಡುತ್ತ ಕುಳಿತುಬಿಟ್ಟಿದ್ದರು ಅವನ ವಿಶ್ವಬಂಧುತ್ವ, ಸದಯಹೃದಯತೆ, ಸದ್ಧರ್ಮಪ್ರವೃತ್ತಿ ಮೊದಲಾದವುಗಳನ್ನು ಅವರು ಮನದಲ್ಲಿಯೇ ಯಥೇಷ್ಟವಾಗಿ ಬಣ್ಣಿಸತೊಡಗಿದರು. ಪೃಥ್ವೀರಾಜನ ಮಾತುಗಳನ್ನು ಕೇಳಿ ಘೋರಿಯಾದರೂ ವಿಸ್ಮಿತನಾಗಿದ್ದನು. ತನ್ನನ್ನು 'ಶೂಲಕ್ಕೇರಿಸುವನೋ, ನೈದೊಗಲು ಸುಲಿಸುವನೋ, ಜೀವಂತ ಸುಡಿಸುವನೋ' ಎಂದು ಗಾಬರಿಗೊಂಡಿದ್ದ ಅವನ ಮನಸ್ಸು ಈಗ 'ಜೀವವೇ ಬದುಕಿದೆ' ಎಂದೆನ್ನತೊಡಗಿತ್ತು.

ಪೃಥ್ವೀರಾಜನು ಮಾತಿಗೆ ಏನು ಉತ್ತರ ಕೊಡಬೇಕೆನ್ನುವದು ಅವನಿಗೆ ತಿಳಿಯದಾಗಿ ಸುಮ್ಮನೆ ನಿಂತುಬಿಟ್ಟನು. ತಟಸ್ಥವೃತ್ತಿಯನ್ನು ಹೊಂದಿದ್ದ ಶಹಾಬುದ್ದೀನನನ್ನು ನೋಡಿ, ಪೃಥ್ವೀರಾಜನು ಮತ್ತೆ:—

"ಯವನಭೂಪರೆ, ಯಾಕೆ ಸುಮ್ಮನಿರುವಿರಿ? ನನ್ನೊಡನೆ ಸ್ನೇಹದಿಂದ ನಡೆಯುವದಕ್ಕೆ ನೀವು ಸಮ್ಮತಿಸುವದಿಲ್ಲವೇನು? ವೈರದಿಂದ ಯಾರಿಗೂ ಒಳಿತಲ್ಲವೆಂಬದನ್ನು ನೀವು ಅರಿತಿಲ್ಲವೇ? ನೀವು ದುರಾಕಾಂಕ್ಷೆಯನ್ನು ತ್ಯಜಿಸಿರಿ. ಸರ್ವಮಾನವೀ ಸೃಷ್ಟಿಯಲ್ಲಿ ಸುಖ-ಶಾಂತಿಗಳು ನೆಲೆಗೊಳ್ಳಬೇಕಾದರೆ, ರಾಜ-ರಾಜರುಗಳು ಸ್ನೇಹದಿಂದ ನಡೆಯದಿದ್ದರೆ ಗತ್ಯಂತರವಿಲ್ಲ. ನನ್ನದಾಗಲಿ ನಿಮ್ಮದಾಗಲಿ ದುಷ್ಟ ಲಾಲಸೆಗಾಗಿ ಪ್ರಜಾಜನರ ನೆತ್ತರವನ್ನು ಸೂರೆಮಾಡಬೇಕೆನ್ನುವದು ಎಲ್ಲಿಯ ನ್ಯಾಯ? ಜಗತ್ತಿನಲ್ಲಿ ಅವರವರ ಧರ್ಮ, ಅವರವರ ದೇಶ, ಅವರವರ ಸಂಪತ್ತು ಮೊದಲಾದವುಗಳು ಪ್ರತಿಯೊಬ್ಬರಿಗೂ ಪ್ರಿಯವಾಗಿರುವವು. ಹೀಗಿದ್ದು ಅನ್ಯರ ಧರ್ಮವನ್ನು ನಾಶಮಾಡಬೇಕೆಂದಾಗಲಿ, ಅವರ ಸಂಪತ್ತನ್ನು ಅಪಹರಿಸಬೇಕೆಂದಾಗಲಿ, ಅವರ ರಾಜ್ಯವನ್ನು ಸ್ವಾಧೀನಪಡಿಸಿಕೊಂಡು ಅವರ ಮೇಲೆ ತಮ್ಮ ಆಧ್ಯತೆ ನಡೆಯಿಸಿ ಕೇವಲ ತಮಗೆ ಸುಖ-ಸೌಕರ್ಯಗಳನ್ನು ಒದಗಿಸಿಕೊಳ್ಳಬೇಕೆಂದಾಗಲಿ ರಾಕ್ಷಸೀ ಭಾವನೆಯನ್ನು ತಳೆಯುವದು ವಿಶ್ವಧರ್ಮವಿಘಾತಕವಾಗಿರುವದು. ಹೀಗೆ ವಿಶ್ವಧರ್ಮದ್ರೋಹಿಗಳಾದರೆ ಪರಮಾತ್ಮನ ನ್ಯಾಯಿಾ ಸೃಷ್ಟಿಯಲ್ಲಿ ನಾವು ಅಪರಾಧಿಗಳೆಂದು ನಿರ್ಣಯಿಸಲ್ಪಟ್ಟು, ಆತನ ಕ್ಷೋಭೆಗೆ ಒಳಗಾಗುವೆವು. ಯವನ ವೀರರೆ, ಇದನ್ನು ನೆನೆದೇ ನಾನು ಸ್ನೇಹದ ಯಾಚನೆ ಮಾಡುತ್ತಿರುವೆನು. ನೀವು ನನ್ನ ಮಾತಿಗೊಪ್ಪುವದರಿಂದ ಉಭಯತರ ಕಲ್ಯಾಣವೂ ಸಾಧಿಸುವಂತಿರುವದು. ಕೃತಾಪರಾಧದ ಬಗ್ಗೆ ಪಶ್ಚಾತ್ತಾಪ ವ್ಯಕ್ತಪಡಿಸಿ ಸ್ನೇಹದಿಂದ ನಡೆಯುವ ಬಗ್ಗೆ ವಚನ ಕೊಡಿರಿ."

"ಆರ್ಯ ಸಮ್ರಾಟರೆ, ನಾನು ಪರಾಭೂತನಾಗಿ ನಿಮ್ಮ ಕೈಯಲ್ಲಿ ಸಿಕ್ಕಿರುವೆನೆಂದು ಪ್ರೇಮದ ಮಾತಿನಿಂದ ನನ್ನನ್ನು ಬಂಧಿಸಿ, ಕ್ಷಮಾದಾನಬೇಡಬೇಕೆಂದು ಹೇಳುವ ನಿಮ್ಮ ಮಾತಿನ ಅರ್ಥವು ನನಗೆ ಚನ್ನಾಗಿ ಆಯಿತು. ಜೀವ ಹೋದರೂ ನಾನು ಕ್ಷಮೆಯನ್ನು ಯಾಚಿಸುವದಿಲ್ಲ. ಈ ಶಹಾಬುದ್ದೀನನು ಅಲ್ಲಾನಲ್ಲಲ್ಲದೆ ಮತ್ತಾರಲ್ಲಿಯೂ ತಲೆಬಾಗಿಸತಕ್ಕವನಲ್ಲ."

"ಶಹಾಬುದ್ದೀನಶಹರೆ, ಹಿಂದುಗಳಾದ ನಾವು ಪರಮಾತ್ಮನನ್ನು ಸ್ತುತಿಸುವೆವು; ಮುಹಮ್ಮದೀಯರಾದ ನೀವು ಅಲ್ಲಾನನ್ನು ಪ್ರಾರ್ಥಿಸುವಿರಿ. ನಾಮಮಾತ್ರ ಭೇದದಿಂದ ನಮ್ಮ ನಿಮ್ಮ ಆರಾಧ್ಯ ದೇವತೆಗಳು ಬೇರೆ ಬೇರೆ ಎಂದು ತಿಳಿಯಲಾಗದು.

ಹಿಂದು-ಮುಸಲಮಾನರಲ್ಲಿ ಸ್ನೇಹಸಂಬಂಧವನ್ನು ಕಾಯುವ ಬಗ್ಗೆ ಅಲ್ಲಾನನ್ನು ಸ್ಮರಿಸಿ ಹೇಳಿರಿ. ನಾನು ಜಯಶಾಲಿಯಾಗಿರುವನೆಂದು ಬಲಾತ್ಕಾರದಿಂದ ನಿಮ್ಮನ್ನು ಅಲ್ಲದ ಕಾರ್ಯಕ್ಕೆ ಹಚ್ಚಲು ನಾನಿಚ್ಛಿಸುವದಿಲ್ಲ. ನೀವು ಅಲ್ಲಾನಲ್ಲಿ ಕ್ಷಮೆ ಬೇಡು ವದಕ್ಕೆ ಹಿಂಜರಿಯುವವೇಕೆ? ಸೆರೆಯಾಳುಗಳಂತೆ ಕ್ಷಮಾಯಾಚನೆ ಮಾಡಿ ಜೀವ ವನ್ನುಳಿಸಿಕೊಂಡು ಸ್ವದೇಶಕ್ಕೆ ಹೋಗಬೇಕೆಂದು ಹೇಳುತ್ತಿರುವೆನಾಗಿ ನೀವು ತಿಳಿದುಕೊಳ್ಳದೆ, ಭಾವೀ ರಾಷ್ಟ್ರೋನ್ನತಿಗಾಗಿ ವಿಶ್ವಧರ್ಮವನ್ನು ನೆನೆದು ಹೇಳುತ್ತೇ ನೆಂದು ತಿಳಿಯಿರಿ. ನೀವು ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ ಮುಂದೆ ಹಿಂದುಸ್ತಾನವ ಮೇಲೆ ದಂಡೆತ್ತಿ ಬರುವದಿಲ್ಲೆಂದು ವಚನ ಕೊಡಬೇಕು."

"ಆರ್ಯ ಸಮ್ರಾಟರೆ, ನೀವು ಹೇಳಿದಂತೆ ಕೇಳಿ ಜೀವಿಸಿರುವದಕ್ಕಿಂತ ಮರ ಣವೇ ಮೇಲೆಂದು ನಾನು ತಿಳಿಯುತ್ತಿರುವೆನು. ನೀವು ನನಗೆ ಯಾವ ಶಿಕ್ಷೆ ವಿಧಿ ಸುವಿರೋ, ಅದನ್ನು ಅನುಭವಿಸುವದಕ್ಕೆ ನಾನು ಸಿದ್ಧನಿರುವೆನು."

"ಯವನ ವೀರರೆ, ನಿಮ್ಮ ಕಲ್ಪನೆಯು ತಪ್ಪಾದದ್ದಿರುವದು. ನನ್ನಲ್ಲಿ ಕ್ಷಮೆ ಬೇಡಬೇಕೆಂದು ನಾನು ನಿಮಗೆಲ್ಲಿ ಹೇಳುವೆನು?"

"ನಿಮ್ಮ ಮಾತಿನ ಸಾರಾಂಶವೇ ಹಾಗಿರುವದು."

"ಶಹಾಬುದ್ದೀನಶಹರೆ, ನಾನು ಯುದ್ಧಕ್ಕೆ ಬಹಳವಾಗಿ ಅಂಜುತ್ತಿರುವೆನು ನಿಮ್ಮ ರಾಕ್ಷಸೀ ಲಾಲಸೆಗಾಗಿ ಪ್ರಜೆಗಳ ರಕ್ತವನ್ನು ಭೂಮಿಗೆ ಕೆಡಹುವದಕ್ಕೆ ನನ್ನ ಮನಸ್ಸು ಹಿಂಜರಿಯುವದು. ಅಂತೆಯೇ ಯುದ್ಧಪ್ರಸಂಗವನ್ನು ತಪ್ಪಿಸಬೇಕೆಂದು ಹವಣಿಸತೊಡಗಿರುವೆನು. ನಿಮ್ಮನ್ನು ಕಾರಾಗೃಹದಲ್ಲಿರಿಸಿದರೆ, ಇಲ್ಲವೆ ಕ್ರೂರತನ ದಿಂದ ನಿಮ್ಮ ಕೊಲೆ ಮಾಡಿದರೆ ಯುದ್ಧಪ್ರಸಂಗ ತಪ್ಪುವದೆಂದು ನಾನು ತಿಳಿ ದಿರುವದಿಲ್ಲ. ಹಾಗೆ ಮಾಡುವದರಿಂದ ವೈಮನಸ್ಸು ಮತ್ತಿಷ್ಟು ಪ್ರಖರವಾಗಿ ರಾಜ್ಯಕ್ಕೆ ಗಂಡಾಂತರವೊದಗುವದು. ಹಿಂದೂ-ಮುಸಲ್ಮಾನ ರಾಷ್ಟ್ರಗಳು ಒಂದ ಕ್ಕೊಂದು ಸಂಬಂಧಿಸಿರುವದರಿಂದ ಪರಸ್ಪರರಲ್ಲಿ ಮೈತ್ರಿಯು ದೃಢವಾಗಿರಬೇಕೆಂದು ನಾನು ಆಶಿಸುವೆನು. ಹೇಳಿರಿ, ನೀವು ಇನ್ನುಮೇಲೆ ಹಿಂದುರಾಜ್ಯದ ಮೇಲೆ ದಂಡೆತ್ತಿ ಬರುವದಿಲ್ಲವೆಂದು ಸ್ಪಷ್ಟವಾಗಿ ಹೇಳಿರಿ. ನಾವು ಐಕ್ಯದಿಂದಿದ್ದರೆ ದೇಶ ದೊಳಗಿನ ಕಲಾಭಿವೃದ್ಧಿಯಾಗುವದು; ಪರರಾಷ್ಟ್ರಗಳ ಭಯವು ನಿವಾರಣೆಯಾಗು ವದು. ನಾನು ಕೇವಲ ಹೇಡಿತನದಿಂದ ಹೀಗೆ ಬಿನ್ನಯಿಸುವೆನೆಂದು ತಿಳಿಯ ಬೇಡಿರಿ; ಹಾಗು ನನ್ನ ಮಾತನ್ನು ತಿರಸ್ಕರಿಸಬೇಡಿರಿ. ಸಾರಾಸಾರ ವಿಚಾರಮಾಡಿ ಒಡಂಬಡಿಕೆ ಮಾಡಿಕೊಳ್ಳಿರಿ" ಎಂದು ಪೃಥ್ವೀರಾಜನು ಅಂತಃಕರಣಪೂರ್ವಕವಾಗಿ ನುಡಿದನು.

ಪೃಥ್ವೀರಾಜನ ಔದಾರ್ಯ, ಪ್ರಜಾವತ್ಸಲತೆ, ಪರಧರ್ಮಸಹಿಷ್ಣುತೆ, ವಿಶ್ವ ಕೌಟುಂಬಿಕ ವೃತ್ತಿ, ಸಮತಾಬುದ್ಧಿ ಮೊದಲಾದ ಉತ್ತಮೋತ್ತಮ ಸದ್ಗುಣಗಳನ್ನು ನೋಡಿ, ಶಹಾಬುದ್ದೀನ ಘೋರಿಯು ಆನಂದಪರವಶನಾದನು. ಆಗ ಅವನಲ್ಲಿಯ ತಾಮಸ ಗುಣಗಳು ನಾಶವಾಗಿ ಸಾತ್ವಿಕ ವೃತ್ತಿಯು ನೆಲೆಗೊಂಡಿತು. ಅವನು ಪೃಥ್ವೀರಾಜನನ್ನು ಕುರಿತು:—

"ಪೃಥ್ವೀರಾಜರೇ, ನಿಮ್ಮಲ್ಲಿಯ ವಿಶ್ವಧರ್ಮವನ್ನು ನೋಡಿ ಪರಮಾನಂದವಾಯಿತು. ಅಕುಂಚಿತ ದೃಷ್ಟಿಯುವರಾದ ನಾವು ಕೇವಲ ಸ್ವಾರ್ಥ ದೃಷ್ಟಿಯುಳ್ಳವರಿರುವೆವು. ನೀವು ನಿಮ್ಮ ದೇಶವಷ್ಟೇ ಅಲ್ಲ; ಇಡೀ ವಿಶ್ವವೇ ಸುಖ-ಸ್ವಾತಂತ್ರ್ಯದಿಂದ ಬಾಳಬೇಕೆಂದು ಸಾಹಸಬಡತೊಡಗಿರುವಿರಿ. ಧನ್ಯರು! ವಿಶ್ವಕುಟುಂಬಿಗಳಾದ ನೀವು ಪರಮ ಧನ್ಯರು! ನಾನು ಅಜ್ಞಾತನದಿಂದ ಮನಬಂದಂತೆ ಆಚರಿಸಿದ್ದನ್ನು ನೀವು ಕ್ಷಮಿಸಿರಿ. ಇನ್ನು ಮೇಲೆ ನಾನು ಹಿಂದುಗಳೊಡನೆ ಸ್ನೇಹದಿಂದ ನಡೆದುಕೊಳ್ಳುವೆನು."

ಹೀಗೆ ಶಹಾಬುದ್ದೀನನು ನುಡಿದ ಕೂಡಲೆ ಪೃಥ್ವೀರಾಜನು ಅವನನ್ನು ಆಲಿಂಗಿಸಿದನು. ಒಡಂಬಡಿಕೆಯ ಪತ್ರಿಕೆಯು ಬರೆಯಲ್ಪಟ್ಟು ಅದರ ಮೇಲೆ ಶಹಾಬುದ್ದೀನನು ರುಜು ಮಾಡಿದನು. ಪೃಥ್ವೀರಾಜನು ವಿಶ್ವಧರ್ಮವನ್ನು ಅರಿತವನಿದ್ದುದರಿಂದ ಶಹಾಬುದ್ದೀನನ ಮನಸ್ಸನ್ನು ಒಲಿಸಿಕೊಂಡು ಒಪ್ಪಂದ ಮಾಡಿಕೊಂಡನು. ಆಗ ಓಲಗದಲ್ಲಿ 'ಹಿಂದೂ-ಮುಸಲ್ಮಾನಕೀ ಜಯ!' ಎಂದು ಜಯಘೋಷ ಮಾಡಲ್ಪಟ್ಟಿತು!

—·—

"ದೇವೀ ಸ್ವಯಂವರದ ವೇಳೆಯು ಸಮೀಪಿಸಿತು; ಬೇಗನೆ ಮಾಲೆ ಸಿದ್ಧಪಡಿಸಿರಿ."

"ಚಿತ್ರರೇಖೆ, ಯಾರಿಗಾಗಿ ಮಾಲೆ ಸಿದ್ಧಪಡಿಸಬೇಕೇ? ನಾನು ಯಾರನ್ನು ವರಿಸ ಸ್ವಯಂವರ ಬೇಕೆಂದು ನಿಶ್ಚಯಿಸಿರುವೆನೋ, ಯಾವ ಮಹಾಶಯರು ನನ್ನ ಹೃದಯಾಕಾಶವನ್ನು ವ್ಯಾಪಿಸಿರುವರೋ, ಆ ನನ್ನ ಪ್ರಾಣನಾಥರು ಆಗಮಿಸದಿದ್ದ ಮೇಲೆ, ನಾನು ಮಾಲೆಯನ್ನು ಸಿದ್ಧಪಡಿಸುವ ಅವಶ್ಯಕತೆಯೇನು? ನನ್ನ ಹೃದಯಸಮ್ರಾಟರು ಬಾರದಿದ್ದ ಮೇಲೆ ನಾನು ಸ್ವಯಂವರ ಮಂಟಪದಲ್ಲಿ ಹೋಗಬೇಕೆಕೆ? ಚಿತ್ರರೇಖೇ, ಇನ್ನಾದರೂ ಅವರು ಬರಬಹುದೇನೇ?"

"ದೇವೀ, ನೀವು ಪೃಥ್ವೀರಾಜರಲ್ಲಿ ಹೇಗೆ ಧ್ಯಾನಸ್ಥರಾಗಿರುವಿರೋ, ಅದರಂತೆಯೇ ಅವರಾದರೂ ನಿಮ್ಮ ಸ್ಮರಣೆಯಲ್ಲಿ ನಿರತರಾಗಿರುವರು. ದೃಢ ಮನಸ್ಸಿ

ನಿಂದ ಅವರು ನಿಮ್ಮನ್ನು ವರಿಸುವ ಬಗ್ಗೆ ಒಪ್ಪಿರುವರು. ರಾಜಕಾರಣದಲ್ಲಿ ನಿರತ ರಾದ ಅವರಿಗೆ ಯಾವ ವಿಘ್ನಗಳೊದಗಿ, ಸ್ವಯಂವರಕ್ಕೆ ಬರಲು ಆತಂಕವಾಯಿತೆಂಬ ದನ್ನು ಈಗ ಅದಾರು ಹೇಳಬೇಕು?"

"ಅವರು ಬಾರದಿದ್ದರೆ ಹೇಗೆ ಮಾಡಬೇಕು?"

"ನನಗೆ ಈ ವಿಷಯದಲ್ಲಿ ಯಾವದೂ ತಿಳಿಯದಾಗಿದೆ. ಪೃಥ್ವೀರಾಜರು ಇಲ್ಲಿಗೆ ಬಾರದಿರಲಿಕ್ಕೆ ಕಾರಣವೇನೆಂಬದನ್ನು ನೀವು ಅರಿತಿರುವಿರೇನು?"

"ಅವರು ನನ್ನಮೇಲಿಟ್ಟ ಪ್ರೇಮವನ್ನು ತೆಗೆದುಹಾಕಿರಬಹುದೆಂದು ತರ್ಕಿ ಸುವೆಯಾ?"

"ಛೆ! ಕಾಲತ್ರಯದಲ್ಲಿಯೂ ಹಾಗಾಗದು. ನಿಮ್ಮ ಮಾನಸಪತಿಗಳು ಇಲ್ಲಿಗೆ ಬಾರದ ಕಾರಣವು ಈಗ ನನ್ನ ಲಕ್ಷ್ಯದಲ್ಲಿ ಬಂತು." "ಅದೇನು?"

"ರಾಜಸೂಯ ಯಾಗವನ್ನು ಮಾಡಿ ತಾವು ಅಧಿರಾಜರೆನಿಸಿಕೊಳ್ಳಬೇಕೆಂದು ನಿಮ್ಮ ತಂದೆಯವರು ಸಾಹಸ ಮಾಡಿದರಷ್ಟೇ? ಕಪ್ಪ-ಕಾಣಿಕೆಗಳನ್ನು ತೆಗೆದು ಕೊಂಡು ಯಾಗಕ್ಕೆ ಬರಬೇಕೆಂದು ಅವರು ಪೃಥ್ವೀರಾಜರಿಗೆ ತಿಳಿಸಿದ್ಧರಂತೆ! ಅಧಿ ರಾಜರೂ, ಮಾನಧನರೂ, ವಿಕ್ರಮಶಾಲಿಗಳೂ ಆದ ಅವರು ಮಾಂಡಲಿಕರೆಂದು ಹೇಳಿಸಿಕೊಳ್ಳುವರೇಕೆ? ಇಂಥ ಅಪಮಾನಕಾರಕ ಸ್ಥಳಕ್ಕೆ ಹೋಗಬಾರದೆಂದು ಅವರು ಸ್ವಯಂವರಕ್ಕಾದರೂ ಬರಲಿಲ್ಲ. ಕಾರಣ ಅವರ ಆಶೆಯನ್ನು ಹಿಡಿಯಬೇಡಿರಿ."

"ಸ್ವಯಂವರವನ್ನು ಸದ್ಯಕ್ಕೆ ನಿಲ್ಲಿಸುವಬಗ್ಗೆ ನಾನು ತಂದೆಯವರಿಗೆ ಹೇಳಿ ಕೊಳ್ಳುವೆನು."

"ಹಾಗೆ ಮಾಡಿದರೆ ಯೋಗ್ಯವೆನಿಸಬಹುದೆ?"

"ಅದಕ್ಕೆ ನಾನು ಮಾಡಲೇನು?"

"ಸಂಯುಕ್ತಾದೇವಿಯವರೇ, ನನಗೊಂದು ವಿಚಾರ ತೋಚಿದೆ. ಅದರಂತೆ ನಡೆಯುವದಕ್ಕೆ ನೀವು ಒಪ್ಪಿದರೆ ಒಳಿತಾಗುವದು."

"ಚಿತ್ರರೇಖೆ, ನಾನು ದಿಙ್ಮೂಢಳಾಗಿರುವೆನು. ನೀನು ಈ ಕಾರ್ಯದಲ್ಲಿ ನನಗೆ ಮಾರ್ಗದರ್ಶಕಳಾಗಿ ಶುಭೋದಯವನ್ನುಂಟು ಮಾಡು."

"ರಾಜಸೂಯಯಾಗಕ್ಕೆ ಪೃಥ್ವೀರಾಜರೂ ಸಮರಸಿಂಹರೂ ಬರಲಿಲ್ಲವೆಂದು ನಿಮ್ಮ ತಂದೆಯವರು ಅವರನ್ನು ಅಪಮಾನಪಡಿಸುವ ಉದ್ದೇಶದಿಂದ ಅವರೀರ್ವರ ಪ್ರತಿಮೆಗಳನ್ನು ಚಿನ್ನ-ಬೆಳ್ಳಿಗಳಿಂದ ಮಾಡಿಸಿ, ದ್ವಾರಪಾಲಕರಂತೆ ಸ್ವಯಂವರ ಮಂಟಪದ ಬಾಗಿಲಲ್ಲಿ ನಿಲ್ಲಿಸಿರುವರು. ನೀವು ಪೃಥ್ವೀರಾಜರ ಆ ಚಿನ್ನದ ಪ್ರತಿಮೆಗೆ ಮಾಲೆಹಾಕಿರಿ."

"ಸಖೀ, ಒಳ್ಳೆ ಹಂಚಿಕೆ ಹುಡುಕಿದೆ. ಈ ಯುಕ್ತಿಯಿಂದ ನನ್ನ ಮನೋಭೀಷ್ಟವು ಈಡೇರುವದರಲ್ಲಿ ಸಂದೇಹವಿಲ್ಲ."

"ದೇವೀ, ನಿಮ್ಮ ಪ್ರಾಣನಾಥರಿಗಾಗಿ ಮಾಲೆಯನ್ನು ಕಟ್ಟಿರಿ." ಎಂದು ಚಿತ್ರರೇಖೆಯು ನುಡಿದ ಕೂಡಲೆ ಸಂಯುಕ್ತೆಯು ಅದೇ ಅರಳುತ್ತಿರುವ ನವ ಕುಸುಮಗಳನ್ನು ತನ್ನ ಮನೋರಮಣನಿಗಾಗಿ ಎತ್ತ ತೊಡಗಿದಳು.

ಚಿತ್ರರೇಖೆಯು ಸಂಯುಕ್ತೆಯ ಪ್ರೇಮಪತ್ರಿಕೆಯನ್ನು ಪೃಥ್ವೀರಾಜನಿಗೆ ಮುಟ್ಟಿಸಿದಳು. ಅವನು ಆ ಪತ್ರವನ್ನು ಓದಿದೊಡನೆಯೆ ಸಂಯುಕ್ತೆಯಲ್ಲಿ ಪರಮಾನುರಾಗವುಳ್ಳವನಾದನು. ಚಿತ್ರರೇಖೆಯ ಮುಖದಿಂದ ಅವಳ ಗುಣ-ರೂಪಶೀಲಗಳನ್ನು ಕೇಳಿ ಅವಳನ್ನು ವರಿಸಬೇಕೆಂದು ನಿಶ್ಚಯಿಸಿಕೊಂಡನು. ಯಾವಾಗ ಸಂಯುಕ್ತೆಯ ದರ್ಶನದಿಂದ ನೇತ್ರಸಾಫಲ್ಯಹೊಂದುವೆನೋ, ಯಾವಾಗ ಆ ನಾರೀರತ್ನವನ್ನು ವರಿಸಿ ಧನ್ಯನಾಗುವೆನೋ, ಎಂದು ಅವನು ಅತ್ಯಾತುರೆಪಟ್ಟನು. ಜಯಚಂದ್ರನು ತನ್ನನ್ನು ರಾಜಸೂಯಯಾಗಕ್ಕೆ ಮರ್ಯಾದೆಯಿಂದ ಬರಮಾಡಿಕೊಳ್ಳುವನೆಂದೂ, ಆಗ ತನ್ನ ಮನೋಹಾರಿಣಿಯ ದರ್ಶನಲಾಭವಾಗುವದೆಂದೂ ಅವನು ಭಾವಿಸಿದ್ದನು. ಕಡೆಗೆ ಅವನ ಕಲ್ಪನೆಯು ವಿಪರೀತವಾಯಿತು. ಮಾನಧನನಾದ ಪೃಥ್ವೀರಾಜನು ಜಯಚಂದ್ರನ ಅಪಮಾನಕಾರಕ ಆಮಂತ್ರಣವನ್ನು ಸ್ವೀಕರಿಸುವನೇಕೆ?

ರಾಜಸೂಯಯಾಗದ ಸಮಾಪ್ತಿಯಾದೊಡನೆಯೆ ಸಂಯುಕ್ತೆಯ ಸ್ವಯಂವರ ನಡೆಯುವದೆಂಬದನ್ನು ಕೇಳಿ ಪೃಥ್ವೀರಾಜನು ಗಾಬರಿಯಾದನು. ಸಂಯುಕ್ತೆಯು ತನ್ನಲ್ಲಿ ನಿಜವಾಗಿ ಪ್ರೇಮವಿಟ್ಟಿದ್ದರೆ, ಸ್ವಯಂವರ ಕಾರ್ಯಕ್ಕೆ ಸಮ್ಮತಿಸಿದಳೇಕೆಂದು ಅವನು ಅವಳ ನಿರ್ಮಲ ಹೃದಯದ ಬಗ್ಗೆ ಸಂಶಯಪಡತೊಡಗಿದನು. ಅವಳ ತಂದೆಯ ಒತ್ತಾಸೆಗಾಗಿ ಸ್ವಯಂವರ ಕಾರ್ಯವು ಪ್ರಾರಂಭವಾಗಿರುವದೆಂದು ಅವನು ಕಲ್ಪಿಸಿದನು. ಪ್ರೇಮಮಯಿಯಾದ ಸಂಯುಕ್ತೆಯು ಬಲಾತ್ಕಾರದಿಂದಲಾದರೂ ಅನ್ಯರನ್ನು ವರಿಸುವಂತಹ ಶಿಥಿಲ ಮನೋವೃತ್ತಿಯವಳಿರಬಹುದೇನೆಂದು ಅವನು ಯೋಚಿಸತೊಡಗಿದನು. ಚಿತ್ರರೇಖೆಯು ಅವಳ ಸ್ವಭಾವ ವರ್ಣನೆಯನ್ನು ಬಹಳವಾಗಿ ಮಾಡಿದ್ದನ್ನು ನೆನಪಿಗೆ ತಂದು, ಅವನು ಮನದಲ್ಲಿ ಧೈರ್ಯತಾಳಿದನು. ತಾನು ಸ್ವಯಂವರಕ್ಕೆ ಬಾರದಿದ್ದ ಕಾರಣವನ್ನು ತಿಳಿಸಿ, ತನ್ನ ಮೇಲೆ ವಿಶುದ್ಧಪ್ರೇಮವುಳ್ಳವಳಾಗಿದ್ದರೆ ಸ್ವಯಂವರ ಕಾರ್ಯವನ್ನು ನಿಲ್ಲಿಸಿಬಿಡಬೇಕೆಂದು ಅವನು ಸಂಯುಕ್ತೆಗೆ ಪತ್ರಿಕೆಯೊಂದನ್ನು ಬರೆದು, ಅದನ್ನು ಅಟವೀಸಾಮ್ರಾಜ್ಯದ ಸಮ್ರಾಟನಾದ ಮನ್ನಾಡಾಕೂನ ಕಡೆಗೆ ಕೊಟ್ಟು ಕಳಿಸಿದನು. ಸಂಯುಕ್ತೆಯು

ದಿಲ್ಲಿಗೆ ಬರಲೊಪ್ಪಿದರೆ, ಅವಳನ್ನು ಅತ್ಯಂತ ಜಾಗ್ರತೆಯಿಂದ ಕರೆದುಕೊಂಡು ಬರಬೇಕೆಂದೂ ಅವನು ಮನ್ನಾನಿಗೆ ಹೇಳಿದ್ದನು.

"ಚಿತ್ರರೇಖೆ, ತಂದೆಯವರು ಮಾಡಿದ ಅಪಮಾನವನ್ನು ನುಂಗಿಕೊಂಡು ಅವರು ಸ್ವಯಂವರಕ್ಕೆ ಬಂದರೆ ಬಂಗಾರದಂತಹ ಕೆಲಸವಾಗುವದು," ಎಂದು ಸಂಯುಕ್ತೆಯು ಸಿದ್ಧವಾಗಿದ್ದ ಮಲ್ಲಿಗೆಯ ಮಾಲೆಯಲ್ಲಿ ನಡುನಡುವೆ ಸೇವಂತಿಗೆ ಗುಲಾಬಿ ಹೂಗಳನ್ನು ಕಟ್ಟುತ್ತ ನುಡಿದಳು.

"ನಿಮ್ಮ ತಂದೆಯವರಿಂದ ಅನುಚಿತವು ಘಟಿಸಿದ್ದರಿಂದಲೇ ಅವರು ಇಲ್ಲಿಗೆ ಬರುವದನ್ನು ನಿಲ್ಲಿಸಿದರು. ದೇವಿಯವರೆ, ಅವರು ನಿಮ್ಮ ದರ್ಶನ-ಸಹವಾಸಗಳಿಗಾಗಿ ಎಷ್ಟು ಆತುರಗೊಂಡಿರುವರೆಂಬದನ್ನು ಹೇಳುವದಕ್ಕೆ ನನ್ನ ಭಾಷೆಯಲ್ಲಿ ಶಬ್ದಗಳೇ ದೊರೆಯಲೊಲ್ಲವು."

"ನನ್ನ ದೈವವು ಒಳಿತಿಲ್ಲವಾದ್ದರಿಂದಲೆ ಹೀಗಾಗಿರಬಹುದು."

"ಅವರು ಬಾರದಿದ್ದರೇನಾಯಿತು? ಅವರ ಪ್ರತಿಮೆಗೆ ಮಾಲೆ ಹಾಕಿದರೆ ಅವರನ್ನು ವರಿಸಿದಂತಾಗುವದು. ದೇವೀ, ನೀವು ಮಾತ್ರ ಒಳ್ಳೇ ಗಟ್ಟಿಮನಸ್ಸಿನವರಾಗಬೇಕಾಗುವದೆಂಬದನ್ನು ಮರೆಯಬೇಡಿರಿ."

"ಅದೇಕೆ?" ಎಂದು ಸಂಯುಕ್ತೆಯು ಆತುರದಿಂದ ಕೇಳಿದಳು.

"ಪೃಥ್ವೀರಾಜರನ್ನು ವರಿಸುವದಕ್ಕೆ ನಿಮ್ಮ ತಂದೆ-ತಾಯಿಗಳ ಒಪ್ಪಿಗೆ ದೊರೆಯಲಾರದು. ನೀವು ಅವರ ಪ್ರತಿಮೆಗೆ ಮಾಲೆ ಹಾಕಿದರೆ..........."

"ಹಾಕಿದರೇನಾಗುವದು? ಅವರು ನನ್ನ ಮೇಲೆ ಕ್ರುದ್ಧರಾಗುವರು; ಮನೆ ಬಿಡಿಸುವರು; ಇಲ್ಲವೆ ಮನಬಂದ ಶಾಸನ ಮಾಡುವರು. ನಾನು ಅವುಗಳೆಲ್ಲವನ್ನು ಅನುಭವಿಸುವದಕ್ಕೆ ಸಿದ್ಧಳೇ ಇರುವೆನು. ನನ್ನ ಮನಸ್ಸಿನ ನಿರ್ಧರವು ಮೇರುಗಿರಿಗಿಂತಲೂ ಅಚಲವಿರುವದು. ವರಿಸಿದರೆ ಪೃಥ್ವೀರಾಜರನ್ನೇ ವರಿಸುವೆನು; ಇಲ್ಲದಿದ್ದರೆ ಆಜನ್ಮ ಅವಿವಾಹಿತಳಾಗಿರುವೆನು....................."

ಸಂಯುಕ್ತೆಯು ಮಧ್ಯದಲ್ಲಿ ಬಾಯಿಹಾಕಿ ಹೀಗೆ ನುಡಿಯುತ್ತಲಿದ್ದಳು. ಅಷ್ಟರಲ್ಲಿ ಮನ್ನಾಡಾಕುವು ಅಲ್ಲಿಗೆ ಬಂದು:—

"ದೇವಿ, ನಿಮ್ಮ ಹೃದಯದೇವತೆಗಳು ಪತ್ರವಿತ್ತಿರುವರು." ಎಂದು ನುಡಿದು ಅವಳ ಕೈಯಲ್ಲಿ ಪೃಥ್ವೀರಾಜನ ಪತ್ರ ಕೊಟ್ಟನು. ಅವಳು ಆ ಪತ್ರವನ್ನು ತೆಗೆದುಕೊಂಡು ಓದತೊಡಗಿದಳು. ಅದನ್ನು ಓದುತ್ತಿರುವಾಗಲೇ ಅವಳ ಮುಖವು ಅರಳಿತು. ಎಳೆನಗೆಯ ಪ್ರಕಾಶದಿಂದ ಅದು ಮತ್ತಿಷ್ಟು ಶೋಭಾಯಮಾನವಾಗಿ ಕಾಣತೊಡಗಿತು. ಮನ್ನಾನು ಅವಳ ಸ್ವರ್ಗೀಯ ಸೌಂದರ್ಯವನ್ನು ನೋಡಿ ಬೆರಗಾಗಿ

ತನ್ನ ಒಡೆಯನಿಗೆ ಪೂರ್ವಪುಣ್ಯದಿಂದಲೇ ಇಂತಹ ಸ್ತ್ರೀ ರತ್ನವು ದೊರೆಯಿತೆಂದು ಆನಂದಗೊಂಡು, ಅವಳನ್ನು ಭಯ-ಭಕ್ತಿಯಿಂದ ನೋಡತೊಡಗಿದನು.

"ಸ್ವಯಂವರದ ವೇಳೆಯಲ್ಲಿ ಪತ್ರಮುಖದಿಂದಲಾದರೂ ದರ್ಶನವಿತ್ತರು." ಎಂದು ಆನಂದೋದ್ಗಾರತೆಗೆದು, ಸಂಯುಕ್ತೆಯು:—"ಚಿತ್ರರೇಖೆ, ನಮ್ಮ ತರ್ಕವು ನಿಜವಾಯಿತು. ಅವರೇನೂ ಇಲ್ಲಿಗೆ ಬರುವದಿಲ್ಲ. ಒಪ್ಪಿಗೆಯಿದ್ದರೆ ಈ ಮನ್ನಾ ಡಾಕುವಿನೊಡನೆ ಹೊರಟುಬರಬೇಕೆಂದೂ, ಇವನು ಸುರಕ್ಷಿತ ರೀತಿಯಿಂದ ದಿಲ್ಲಿಗೆ ಕರೆಕೊಂಡು ಬರುವನೆಂದೂ ಅವರು ತಿಳಿಸಿರುವರು. ನಾನು ಒಮ್ಮೆಲೆ ಇಲ್ಲಿಂದ ಹೇಗೆ ಹೊರಟು ಹೋಗಲಿ?"

ಮನ್ನಾಡಾಕುವಿನ ಹೆಸರು ಕೇಳಿದೊಡನೆಯೆ ಚಿತ್ರರೇಖೆಯು ಬೆಚ್ಚಿಬಿದ್ದು ಅವನ ಮುಖವನ್ನು ದಿಟ್ಟಿಸಿ ನೋಡಿದಳು. ಹಿಂದಕ್ಕೆ ತನ್ನ ತಂದೆ-ತಾಯಿಗಳನ್ನು ವಧಿಸಿದವನು ಇವನೇ, ಎಂಬದು ತಿಳಿದ ಕೂಡಲೆ ಅವಳು ಖತಿಗೊಂಡಳು. ಅವನ ಸರಳಭಾವ, ರಾಜನಿಷ್ಠೆ, ಕಾರ್ಯದಕ್ಷತೆ ಮೊದಲಾದ ಗುಣಗಳು ಪರಕ್ಷಣದಲ್ಲಿ ಲಕ್ಷ್ಯಕ್ಕೆ ಬಂದಕೂಡಲೆ ಅವಳು ಶಾಂತಳಾಗಿ ಸಂಯುಕ್ತೆಯನ್ನು ಕುರಿತು:—

"ಒಮ್ಮೆಲೆ ಇಲ್ಲಿಂದ ಹೋಗುವದರಿಂದ ನಿಮ್ಮ ತಾಯಿ-ತಂದೆಗಳು ಕ್ಷುಬ್ಧರಾಗುವರು. ಮುಂದೆ ಪ್ರಸಂಗವೊದಗಿದಂತೆ ನಡೆಯಲು ಬಂದೀತು; ಸದ್ಯಕ್ಕೆ ಬೇಡ."

"ನೀನು ಚಿತ್ರರೇಖೆಯಲ್ಲವೆ?" ಚಿತ್ರರೇಖೆಯ ಧ್ವನಿಯನ್ನು ಗುರತಿಸಿ, ಮನ್ನಾಡಾಕುವು ಹೀಗೆ ಕೇಳಿ:—"ಓಹೋ! ಅಪರಾಧವಾಯಿತು, ನೀವು ಬಟಿಂಡಾಗಡದ ರಾಣಿಯವರಾದ ಚಿತ್ರರೇಖಾದೇವಿಯವರಲ್ಲವೆ?"

"ಹೌದು." ಎಂದು ಚಿತ್ರರೇಖೆಯು ನುಡಿದಳು. ಆಗ ಮನ್ನಾನು:— ಸಂಯುಕ್ತೆಯನ್ನು ಕುರಿತು "ದೇವೀ, ನೀವು ನನ್ನೊಡನೆ ಬರುತ್ತಿದ್ದರೆ ಈಗಲೆ ನಡೆಯಿರಿ. ರಾಜಧಾನಿಯ ಬಳಿಯ ಅರಣ್ಯದಲ್ಲಿ ನನ್ನ ಸೇನೆಯು ಸಿದ್ಧವಿದೆ. ಸ್ವಲ್ಪ ವೇಳೆಯಲ್ಲಿ ಇಲ್ಲಿಂದ ದಾಟಿ ಹೋಗುವದಕ್ಕೆ ಬರುವಂತಿದೆ. ನಿಮ್ಮ ಒಪ್ಪಿಗೆಯಿದ್ದರೆ ಕರೆದುಕೊಂಡು ಬರುವದಕ್ಕಾಗಿ ಮಹಾರಾಜರು ಹೇಳಿರುವರು."

"ಈಗ ನನಗೆ ಬರುವದಕ್ಕೆ ಮಾರ್ಗವಿಲ್ಲ. ಸ್ವಯಂವರದಲ್ಲಿ ಅವರ ಸ್ವರ್ಣ ಪುತ್ಥಳಿಗೆ ಮಾಲೆ ಹಾಕಬೇಕೆಂದು ನಾನು ನಿರ್ಧರಿಸಿರುವೆನು. ಈ ಸಂಗತಿಯನ್ನು ನೀನು ನಿನ್ನ ಒಡೆಯರಿಗೆ ತಿಳಿಸು. ಪ್ರಸಂಗವೊದಗಿದರೆ ನಾನು ಅವರಿಗೆ ತಿಳಿಸುವೆನು; ಆಗ ನನ್ನನ್ನು ಕರೆದುಕೊಂಡು ಹೊಗಲೊಲ್ಲರೇಕೆ? ಮೊದಲಿನಿಂದ ನಾನೇ ಗೊಂದಲವೆಬ್ಬಿಸುವದಕ್ಕೆ ಹೊಗುವದಿಲ್ಲ." ಎಂದು ಸಂಯುಕ್ತೆಯು ನುಡಿದಳು. ಕೂಡಲೆ ಮನ್ನಾನು ಅವಳಿಗೆ ನಮಸ್ಕಾರಮಾಡಿ ಅಲ್ಲಿಂದ ಹೊರಟನು. ಅಷ್ಟರಲ್ಲಿ ವಿಪುಲಾದೇವಿಯು ಅಲ್ಲಿಗೆ ಬಂದು:—

"ಸಂಯುಕ್ತೆ, ಏನಮ್ಮಾ ಇದು! ದಾಸಿಯರಿಂದ ಎಲ್ಲಕಡೆಗೂ ಹುಡುಕಿಸಿದೆನು. ಇಂತಹ ಅವಸರದಲ್ಲಿ ಉದ್ಯಾನವನ್ನು ಹಿಡಿದು ಕುಳಿತುಬಿಟ್ಟರೆ ಹೇಗೆ? ನಿನಗೆ ಚಿತ್ರರೇಖೆಯೊಬ್ಬಳಿದ್ದರಾಯಿತು; ಯಾವ ಪರಿವೆಯೂ ಉಳಿಯುವುದಿಲ್ಲ. ಬೇಗನೆ ನಿನ್ನನ್ನು ಕರೆದುಕೊಂಡು ಬರುವದಕ್ಕಾಗಿ ತಿಳಿಸಿರುವರು. ಇಂತಹ ಪ್ರಸಂಗದಲ್ಲಿಯಾದರೂ ಸ್ವಲ್ಪ ಚಟುವಟಿಕೆಯಿರಬೇಕು. ಹೂಂ ಬೇಗನೆ ಏಳು!"

"ಅಮ್ಮಾ, ಇಷ್ಟೇಕೆ ಅವಸರ ಮಾಡುವಿರಿ? ರಾಜಪುತ್ರರು ಕುಳಿತಿರುವರೆಂದು ಸ್ವೀಕೃತಕಾರ್ಯವನ್ನು ಅಲ್ಲಿಂದಲ್ಲಿಯೇ ಬಿಟ್ಟುಬಿಡಬೇಕೇನು? ಇಗೊಳ್ಳಿರಿ. ಮಾಲೆಯು ಪೂರ್ಣವಾಯಿತು. ಏಳವ್ವಾ ಚಿತ್ರರೇಖೆ, ಸ್ವಯಂವರ ಮಂಟಪಕ್ಕೆ ಹೋಗೋಣ" ಎಂದು ಸಂಯುಕ್ತೆಯು ನುಡಿದು, ಚಿತ್ರರೇಖೆಯನ್ನೊಡಗೊಂಡು ತಾಯಿಯ ಬೆನ್ನ ಹಿಂದೆ ನಡೆದಳು.



ಭವ್ಯವಾದ ಸ್ವಯಂವರ ಮಂಟಪದಲ್ಲಿ ವಂಗ, ಮಾಳವ, ಗುರ್ಜರ, ಲಾಟ, ಕರ್ನಾಟಕ ಮೊದಲಾದ ದೇಶಗಳ ರಾಜಪುತ್ರರು ತಮ್ಮ ತಮ್ಮ ಸ್ಥಾನಗಳಲ್ಲಿ ಮಂಡಿಸಿದ್ದರು. ಸಂಯುಕ್ತಾ ಕುಮಾರಿಯು ತಮ್ಮನ್ನೇ ವರಿಸುವಳೆಂದು ಪ್ರತಿಯೊಬ್ಬ ರಾಜಪುತ್ರರೂ ಅಭಿಲಾಷೆಗೊಂಡಿದ್ದರು. ರಾಜಕುಮಾರಿಯು ಯಾವಾಗ ಸ್ವಯಂವರ ಮಂಟಪದಲ್ಲಿ ಬರುವಳೋ ಏನೋ ಎಂದು ಅವರು ಅತ್ಯಾತುರಪಟ್ಟಿದ್ದರು. ಅಷ್ಟರಲ್ಲಿ ಅವಳು ತನ್ನ ಗೆಳತಿಯಾದ ಚಿತ್ರರೇಖೆಯನ್ನೊಡಗೊಂಡು ಮಂಟಪವನ್ನು ಪ್ರವೇಶಿಸಿದ ಕೂಡಲೆ ಅವರು ಸಂಭ್ರಮಗೊಂಡರು. ಸಂಯುಕ್ತೆಯ ಉಚ್ಚತಮವಾದ ರೂಪ-ಲಾವಣ್ಯಗಳನ್ನು ನೋಡಿ ಅವರು ವಿಸ್ಮಿತರಾದರು.

ಸಂಯುಕ್ತೆಯು ಕೈಯಲ್ಲಿ ಪುಷ್ಪಮಾಲೆ ತೆಗೆದುಕೊಂಡು ರಾಜಪುತ್ರರ ಸಾಲಿನಲ್ಲಿ ನಡೆದಿದ್ದಳು. ಚಿತ್ರರೇಖೆಯೂ ಈರ್ವರು ದಾಸಿಯರೂ ಅಲ್ಲಿ ನೆರೆದ ರಾಜಪುತ್ರರ ವಿಷಯಕ್ಕೆ ಗೊತ್ತುವಳಿ ಕೊಡುತ್ತ ಅವಳೊಡನೆ ಸಾಗಿದ್ದರು. ಇವರು ಗುರ್ಜರ ಯುವರಾಜರು; ಇವರು ಕರ್ನಾಟಕ ರಾಜಪುತ್ರರು; ಇವರು ವಂಗರಾಜ ತನಯರು; ಇವರು ಶೂರರು; ಇವರು ಗಂಭೀರರು; ಇವರು ವೀರರು; ಇವರು ಧೀರರು ಮೊದಲಾದ ಸಂಗತಿಗಳನ್ನು ಅವರು ರಾಜಪುತ್ರಿಗೆ ತಿಳಿಸತೊಡಗಿದ್ದರು. ಒಬ್ಬ ರಾಜಪುತ್ರನನ್ನು ದಾಟಿ ಮುಂದೆ ಸಾಗಿದೊಡನೆಯೇ ಮುಂದಿನ ರಾಜಪುತ್ರನು ಸಂಭ್ರಮಗೊಳ್ಳುತ್ತಿದ್ದನು; ಹಿಂದಿನವನು ತಲೆ ಕೆಳಗೆ ಹಾಕುತ್ತಿದ್ದನು. ಈ ಬಗೆಯಾಗಿ ಎಲ್ಲ ರಾಜಪುತ್ರರ ಸ್ಥಿತಿಯೂ ಆಯಿತು. ಸಂಯುಕ್ತೆಯು ಯಾವ ರಾಜಪುತ್ರರಿಗೂ ಮಾಲೆ ಹಾಕಲಿಲ್ಲ. ದಾಸಿಯರ ವರ್ಣನೆ ಸಹಿತ ಹೆಚ್ಚಾಗಿ ಕೇಳದೆ, ಅವಳು ವೇಗದಿಂದ ಮುಂದೆ ಸಾಗಿ ಮಂಟಪದ ಬಾಗಿಲ ಬಳಿಗೆ ಬಂದಳು. ಆಗ

ಅವಳು ಚಿತ್ರರೇಖೆಯನ್ನು ಕುರಿತು:—"ಈ ಪ್ರತಿಮೆಗಳು ಯಾರವು?" ಎಂದು ದ್ವಾರದಲ್ಲಿಯ ಸುವರ್ಣ-ರೌಪ್ಯ ಪ್ರತಿಮೆಗಳ ಬಗ್ಗೆ ಕೇಳಲು, ಚಿತ್ರರೇಖೆಯು:—

"ದೇವಿ, ಇದು ದಿಲ್ಲಿಯ ಸಮ್ರಾಟರಾದ ಪೃಥ್ವೀರಾಜರದು; ಈ ಪ್ರತಿಮೆಯು ಮೇವಾಡದ ರಾಣಾ ಸಮರಸಿಂಹರದು."

ಹೀಗೆ ಚಿತ್ರರೇಖೆಯು ಹೇಳಿದ ಕೂಡಲೆ, ಸಂಯುಕ್ತೆಯು ಪೃಥ್ವೀರಾಜನ ಸುವರ್ಣ ಪ್ರತಿಮೆಗೆ ತನ್ನ ಕೈಯೊಳಗಿನ ಮಾಲೆ ಹಾಕಿದಳು! ಈ ಸ್ಥಿತಿಯನ್ನು ನೋಡಿ ಎಲ್ಲ ರಾಜಪುತ್ರರು ದಂಗುಬಡೆದರು; ಅವರೆಲ್ಲರೂ ಜಯಚಂದ್ರನ ಮೇಲೆ ಖತಿಗೊಂಡರು. ತಮ್ಮೆಲ್ಲರ ಅಪಮಾನ ಮಾಡಬೇಕೆಂದೇ ಇವನು ಬುದ್ಧಿಪೂರ್ವಕ ಹೀಗೆ ಕಾರಸ್ಥಾನ ಮಾಡಿದನೆಂದು ಆ ರಾಜಪುತ್ರರೆಲ್ಲರೂ ಅತ್ಯಂತ ಕ್ಷುಬ್ಧರಾದರು. ಸ್ವಯಂವರ ಮಂಟಪದಲ್ಲಿ ಭಯಂಕರ ಗೊಂದಲವೇಳುವ ಲಕ್ಷಣ ತೋರತೊಡಗಿತು. ಜಯಚಂದ್ರನೂ ವಿಪುಲಾದೇವಿಯೂ ಮಗಳ ಈ ಹುಚ್ಚಾಟವನ್ನು ನೋಡಿ ಸಂತಪ್ತರಾದರು. ತನ್ನ ಮಗಳ ಬುದ್ಧಿಭ್ರಮಣವಾಗಿರುವದೆಂದೂ, ನಾಳಿನ ದಿವಸ ಮತ್ತೆ ಸ್ವಯಂವರ ಸಾಗಿಸುವೆನೆಂದೂ ಜಯಚಂದ್ರನು ಅವರೆಲ್ಲರಿಗೆ ಹೇಳಿ ಶಾಂತತೆ ಕಾಯ್ದನು. ಒಮ್ಮೆ ಸ್ವಯಂವರವಾದ ಮೇಲೆ ಮತ್ತೇತರ ಸ್ವಯಂವರ?

---

ಸಂಯುಕ್ತೆಯು ಪೃಥ್ವೀರಾಜನ ಪ್ರತಿಮೆಗೆ ಮಾಲೆ ಹಾಕಿ ಸ್ವಯಂವರಕ್ಕೆ ಬಂದ ರಾಜಪುತ್ರರನ್ನೆಲ್ಲ, ಭಗ್ನ ಮನೋರಥ ಮಾಡಿದ್ದರಿಂದ ಜಯಚಂದ್ರನ ಮನಸ್ಸು ವ್ಯಾಕುಲಗೊಂಡಿತ್ತು. ಸುವಿ ಚಾರಿಯಾದ ತನ್ನ ಪುತ್ರಿಯಿಂದ ಇಂದು ಇಂತಹ ಮೂರ್ಖತನದ ದೈವಲೀಲೆ! ಕೃತಿಯೇಕೆ ಘಟಿಸಿತೆಂಬದರ ಮರ್ಮವು ಅವನಿಗೆ ತಿಳಿಯ ದಾಯಿತು. ರಾಜಪುತ್ರರ ಸಮುದಾಯವನ್ನು ನೋಡಿ ಮುಂಗಾಣದಂತಾಗಿ, ಅವಳು ಪೃಥ್ವೀರಾಜನ ಪ್ರತಿಮೆಯ ಕೊರಳಲ್ಲಿ ಮಾಲೆ ಹಾಕಿದಳೆಂದು ಬಗೆದು, ಅವನು ಆ ಎಲ್ಲ ರಾಜಪುತ್ರರನ್ನು ಸಮಾಧಾನಪಡಿಸಿದನು. ಮರುದಿವಸ ಸ್ವಯಂವರ ನಡೆಯಿಸುವ ಬಗ್ಗೆ ಜಯಚಂದ್ರನು ಎಲ್ಲ ರಾಜಪುತ್ರರಿಗೆ ಆಶ್ವಾಸನವಿತ್ತದ್ದರಿಂದ, ಅವರೆಲ್ಲರೂ ಸಂತುಷ್ಟರಾಗಿ ತಮ್ಮ ತಮ್ಮ ಬಿಡಾರಗಳಿಗೆ ತೆರಳಿದರು.

ಜಯಚಂದ್ರನೂ ಅವನ ಪತ್ನಿಯಾದ ವಿಪುಲಾದೇವಿಯೂ ತಮ್ಮ ವಾತ್ಸಲ್ಯದ ಪುತ್ರಿಯಾದ ಸಂಯುಕ್ತೆಯಲ್ಲಿ ಅತ್ಯಂತ ಪ್ರೇಮವುಳ್ಳವರಿದ್ದರು. ಅವಳು ಸದ್ಗುಣಿಯೂ; ಸುವಿಚಾರಿಯೂ ಎಂಬದನ್ನು ಅವರು ಪೂರ್ಣವಾಗಿ ಅರಿತವರಿದ್ದರು. ಅಂದಿನ ದಿವಸ ಅವಳಿಂದ ಇಂತಹ ಅನುಚಿತ ಘಟಿಸಿದ ಕಾರಣವು ಅವರಿಗೆ ತಿಳಿಯ

ಲಿಲ್ಲ. ಅವಳ ಈ ಕೃತಿಯಿಂದ ಸರ್ವರೂ ವಿಸ್ಮಿತರಾಗಿದ್ದರು. ತನಗನುರೂಪನಾದ ರಾಜಪುತ್ರನಿಗೆ ಮಾಲೆ ಹಾಕಿ, ಮಗಳು ತಮ್ಮನ್ನು ಕೃತಾರ್ಥರನ್ನಾಗಿ ಮಾಡುವ ಳೆಂದು ಹಾರೈಸಿದ್ದ ಅವಳ ಮಾತಾ-ಪಿತೃಗಳಿಗೆ ಅವಳ ಈ ಕೃತಿಯಿಂದ ಹೇಗಾಗಿರ ಬಹುದೆಂಬುದನ್ನು ಹೇಳುವದು ಅಸಾಧ್ಯವೇ ಸರಿ. ಮಗಳ ಮನಃಸ್ಥಿತಿಯನ್ನು ತಿಳಿದುಕೊಂಡು, ನಾಳಿನ ದಿವಸವಾದರೂ ಯೋಗ್ಯ ವರನನ್ನು ವರಿಸುವದಕ್ಕೆ ಹೇಳ ಬೇಕೆಂಬ ಇಚ್ಛೆಯಿಂದ ಆ ದಂಪತಿಗಳು ಅವಳ ಬಳಿಗೆ ಬಂದರು. ಆಗ ಸಂಯು ಕ್ತೆಯು ಚಿತ್ರರೇಖೆಯೊಡನೆ ಕ್ರೀಡೋದ್ಯಾನದೊಳಗಿನ ಕ್ರೀಡಾಸರೋವರದಲ್ಲಿ ನೌಕಾಕ್ರೀಡನೆ ಮಾಡತೊಡಗಿದ್ದಳು. ತನ್ನ ಹೃದಯಮಂದಿರದಲ್ಲಿ ಸ್ಥಾಪಿತವಾದ ದೇವತೆಗೆ ಮಾಲೆಹಾಕಿದೆನೆಂಬ ಸಂಭ್ರಮದಿಂದ ಸಂಯುಕ್ತೆಯು ತನ್ನ ಸುಕೃತಿ ಯನ್ನು ಚಿತ್ರರೇಖೆಯ ಎದುರಿನಲ್ಲಿ ತಾನೇ ಹೇಳುತಲಿದ್ದಳು. ಅಷ್ಟರಲ್ಲಿ ಆ ಜಲಾ ಶಯದ ತೀರದಲ್ಲಿ ತನ್ನ ತಂದೆ-ತಾಯಿಗಳು ಆಗಮಿಸಿದ್ದರಿಂದ ನೌಕಾವಿಹಾರವನ್ನು ಮುಗಿಸಿ, ಅವಳು ಚಿತ್ರರೇಖೆಯೊಡನೆ ದಂಡೆಗೆ ಬಂದಳು. ವಿಪುಲಾದೇವಿಯು ಕೈಹಿಡಿದು ಅವಳನ್ನು ಬಕುಲವೃಕ್ಷದ ಕೆಳಗೆ ಕರೆದೊಯ್ದಳು.

"ಸಂಯುಕ್ತೆ, ಇಂದು ಹೀಗೇಕೆ ಮಾಡಿದೆಯವ್ವಾ? ನಿನ್ನ ಮನಸ್ಸು ಸ್ವಸ್ಥ ವಿಲ್ಲವೇ? ಮಂಟಪದಲ್ಲಿ ನೆರೆದ ರಾಜಪುತ್ರರನ್ನು ಬಿಟ್ಟು ಪ್ರತಿಮೆಗೆ ಮಾಲೆ ಹಾಕು ವದು ಜಾಣತನವೆ? ನಾಳೆಯಾದರೂ ನೀನು ಒಬ್ಬ ಶ್ರೇಷ್ಠನಾದ ರಾಜಕುಮಾರ ನನ್ನು ವರಿಸುವೆಯೆಂದು ಹಾರೈಸಿರುವೆನು."

"ಅಮ್ಮಾ, ಇದೇನು ಮಾತನಾಡುವಿರಿ? ದಿಲ್ಲಿಯ ಸಮ್ರಾಟರೆಂದು ಮನದಲ್ಲಿ ಭಾವಿಸಿ ನಾನು ಅವರ ಪ್ರತಿಮೆಗೆ ಮಾಲೆ ಹಾಕಿರುವೆನು. ಆರ್ಯ ಕನ್ಯೆಯರು ಇಬ್ಬರನ್ನು ಎಂದಾದರೂ ವರಿಸುವದುಂಟೆ? ನಾನು ಅಸ್ವಸ್ಥತೆಯಿಂದಾಗಲಿ, ಭ್ರಾಂತಿ ಷ್ಟಳಾಗಿಯಾಗಲಿ ಆ ಸುವರ್ಣ ಪ್ರತಿಮೆಗೆ ಮಾಲೆ ಹಾಕಿಲ್ಲ; ಜಾಣತನದಿಂದ ನನ್ನ ಹೃದಯ ಸಮ್ರಾಟನನ್ನು ವರಿಸಿರುವೆನು."

"ಏನು? ನೀನು ಆ ನೀಚ ಪೃಥ್ವಿಯನ್ನು, ನನ್ನ-ಅಸ್ಥಿವೈರಿಯನ್ನು,-ಕುಲ ಕಲಂಕನನ್ನು ವರಿಸಬೇಕೆನ್ನುವೆಯಾ ?..........."

ಹೀಗೆ ಜಯಚಂದ್ರನು ಕ್ರೋಧಾವಿಷ್ಟನಾಗಿ ಮಾತನಾಡುತ್ತಿರಲು, ಸಂಯು ಕ್ತೆಯು ನಡುವೇ ಬಾಯಿ ಹಾಕಿ ಶಾಂತವೃತ್ತಿಯಿಂದ:—"ನಾನವರನ್ನು ಮನಸಾ ಎಂದೋ ವರಿಸಿದ್ದೆನು; ಇಂದು ಸ್ವಯಂವರ ಮಂಟಪದಲ್ಲಿ ಅವರು ಇಲ್ಲದ್ದರಿಂದ ಅವರ ಪ್ರತಿಮೆಗೆ ಮಾಲೆ ಹಾಕಿ, ನನ್ನ ಮನೋಗತವನ್ನು ಬಹಿರಂಗಪಡಿಸಿದೆನಷ್ಟೇ?

ತಂದೆಯವರೆ, ನೀವು ಅವರನ್ನು ನಿಷ್ಕಾರಣ ದ್ವೇಷಿಸುತ್ತಿರುವಿರಿ. ಅಂತಹ ಮಹಾತ್ಮ ರನ್ನು ನಿಂದಿಸುವದರಿಂದ ನಿಮ್ಮ ಕ್ಷುದ್ರಭಾವ ವ್ಯಕ್ತಪಡಿಸಿದಂತಾಗುವದಿಲ್ಲವೆ?"

ಸಂಯುಕ್ತೆಯ ಈ ಮಾತುಗಳನ್ನು ಕೇಳಿ ಜಯಚಂದ್ರನ ತಲೆಯೇ ತಿರುಗಿತು. ಅವನು ತನ್ನ ಪುತ್ರಿಯನ್ನು ಕಡಿದು ಚಲ್ಲುವನೋ, ಹೊಡೆದು ಕೊಲ್ಲುವನೋ ಎಂಬಂತೆ ಉಗ್ರನಾಗಿ ತೋರತೊಡಗಿದನು. ಮಗಳ ವಿಷಯಕ್ಕೆ ಅವನಲ್ಲಿದ್ದ ಪ್ರೇಮಭಾವವೆಲ್ಲ ನಾಶವಾಗಿ, ಅ ಸ್ಥಾನವನ್ನು ಕ್ರೋಧವು ವ್ಯಾಪಿಸಿತು. ನೇತ್ರಗಳು ಕಿಡಿಯನ್ನು ಕಾರುತ್ತಿರುವಂತೆ ಕಾಣತೊಡಗಿದವು.

"ನೀನು ನನ್ನ ಕುವರಿಯೆ? ನೀನು ನನ್ನ ಪ್ರೇಮದ ಪುತ್ರಿಯಾದ ಸಂಯುಕ್ತೆಯೆ? ನೀನು ನಿಜವಾಗಿ ಮನುಷ್ಯಕೋಟಿಯೊಳಗಿನವಳಾದರೂ ಅಹುದೆ? ಅಲ್ಲ-ಅಲ್ಲ; ನೀನು ನನ್ನ ಕುವರಿಯಲ್ಲ! ನೀನು ನನ್ನ ಅಂತಃಕರಣದ ಸಂಯುಕ್ತೆಯಲ್ಲ! ನೀನು ನಿಜವಾದ ಮನುಷ್ಯವರ್ಗದೊಳಗಿನವಳಿರದೆ ಪಿಶಾಚಿಯಿರುವೆ! ಬ್ರಹ್ಮ ರಾಕ್ಷಸಿಯಿರುವೆ! ನನ್ನ ಸತ್ವವನ್ನು ಹೀರಿ, ನನ್ನನ್ನು ಹಿಂಡಿ ಹಿಪ್ಪೆ ಮಾಡುವ ಡಾಕಿನಿಯಿರುವೆ! ಅಂತೆಯೇ ನೀನು ಆಜನ್ಮಶತ್ರುವಾದ ಆ ಕುಲಾಂಗಾರ ಪೃಥ್ವಿಯ ಪ್ರತಿಮೆಗೆ ಮಾಲೆ ಹಾಕಿದೆ! ಅಯ್ಯೋ! ನನ್ನ ಅಂತಃಕರಣವನ್ನು ಭಸ್ಮಸಾತ್ ಮಾಡಿದೆ! ಇದ್ದ ಒಬ್ಬ ಮಗಳು ಯೋಗ್ಯನಾದವನನ್ನು ವರಿಸಿ, ಆನಂದಪಡಿಸುವಳೆಂದು ನಂಬಿದ್ದ ನನ್ನ ಉತ್ಸಾಹವನ್ನು ಹಾಳುಮಾಡಿದೆ! ನೀಚಳೆ, ನಿನ್ನನ್ನು ಏನು ಮಾಡಲಿ! ಹರಿದು ಚಲ್ಲಲಾ! ಕೊಯ್ದು ಹಾಕಲಾ! ಏನು ಮಾಡಲಿ! ಅಯ್ಯೋ! ಏನು ಮಾಡಲಿ!"

ಸಂತಾಪದಿಂದ ಉರಿದುರಿದು ಜಯಚಂದ್ರನು ಹೀಗೆ ಗರ್ಜಿಸುತ್ತಿರುವದನ್ನು ನೋಡಿ ವಿಪುಲಾದೇವಿಯು ನಡುಗಿದಳು; ಚಿತ್ರರೇಖೆಯು ಹೌಹಾರಿದಳು. ಸಂಯುಕ್ತೆಯು ಮಾತ್ರ ಅಂಜದೆ, ಅಳುಕದೆ, ತಟಸ್ಥಳಾಗಿ, ಸಂತಾಪದಿಂದ ಕೆಂಪಾದ ತಂದೆಯ ಮುಖವನ್ನು ಎವೆಯಿಕ್ಕದೆ ನೋಡುತ್ತ ನಿಂತಿದ್ದಳು. ಅವಳು ನಿರ್ಮಲ ಹೃದಯದವಳಿದ್ದಳು; ನಿರಪರಾಧಿಯಿದ್ದಳು. ಹೀಗಿದ್ದ ಮೇಲೆ ಅಲ್ಲದ ಮಾತಿಗಾಗಿ ಆ ವೀರ ಕುವರಿಯು ಅಂಜುವಳೇಕೆ?

"ಶಾಂತರಾಗಿರಿ; ಶಾಂತರಾಗಿರಿ. ಅಪ್ರಬುದ್ಧಳೂ, ಅಜ್ಞಳೂ ಆದ ಸಂಯುಕ್ತೆಯಲ್ಲಿ ಹೀಗೆ ರೋಷಗೊಂಡರೆ ಹೇಗೆ? ಅವಳಿಗೆ ಚೆನ್ನಾಗಿ ತಿಳಿಸಿ ಹೇಳಿ ನಾಳಿನ ಸ್ವಯಂವರದಲ್ಲಿ ಯೋಗ್ಯನಾದ ರಾಜಪುತ್ರನನ್ನು ವರಿಸುವದಕ್ಕಾಗಿ ಹೇಳುವೆನು" ಎಂದು ಸಂತಪ್ತನಾದ ಪತಿಯನ್ನು ಸಮಾಧಾನಪಡಿಸುವದಕ್ಕಾಗಿ ವಿಪುಲಾದೇವಿಯು ನುಡಿದು, ತನ್ನ ಕುವರಿಯನ್ನು ಕುರಿತು ವಾತ್ಸಲ್ಯದಿಂದ:—"ಸಂಯುಕ್ತೆ, ಹೀಗೆ

ಚಂಡಿತನ ಮಾಡಬಾರದವ್ವಾ. ನೀನು ನಮ್ಮ ಮಗಳಿದ್ದು, ತಿಳಿದವಳಿರುವೆ. ಹೀಗಿದ್ದು, ಹಡೆದವರ ಮನಸ್ಸಿಗೆ ದುಃಖವನ್ನುಂಟುಮಾಡುವದು ಪುತ್ರಧರ್ಮವೆನಿಸುವದೆ? ನಾಳಿನ ದಿನ ನೀನು ಒಬ್ಬ ರಾಜಪುತ್ರನನ್ನು ವರಿಸು. ತುಚ್ಛತನಕ್ಕೆ ಬಿದ್ದು ಪ್ರತಿಮೆಗೆ ಮಾಲೆ ಹಾಕಿ, ಪೃಥ್ವೀರಾಜನನ್ನೇ ವರಿಸುತ್ತೇನೆಂದು ಹಟ ಹಿಡಿಯುವದು ಯೋಗ್ಯವೆನಿಸಲಾರದು."

"ಅಮ್ಮಾ, ನೀವು ನನ್ನನ್ನು ವ್ಯರ್ಥವಾಗಿ ಪೀಡಿಸಬೇಡಿರಿ. ನಾನು ಯಾರನ್ನು ವರಿಸಬೇಕೆಂದು ಸಂಕಲ್ಪಮಾಡಿಕೊಂಡಿದ್ದೆನೋ ಅವರ ಪ್ರತಿಮೆಗೇ ಮಾಲೆ ಹಾಕಿರುವೆನು" ಎಂದು ಸಂಯುಕ್ತೆಯು ನುಡಿದು, ತನ್ನ ತಂದೆಯನ್ನು ಕುರಿತು:—"ಅಪ್ಪಾ, ನೀವು ನನ್ನ ಮೇಲೆ ನಿಷ್ಕಾರಣ ಕ್ರೋಧಗೊಳ್ಳತೊಡಗಿರುವಿರಿ. ನೀವು ಏನು ಮಾಡಿದರೂ ನನ್ನ ಮನೋವೃತ್ತಿಯು ಬೇರೆಯಾಗುವಂತಿಲ್ಲ. ಚಹ್ವಾಣ ಕೇಸರಿಯು ನನ್ನ ಹೃದಯವನ್ನೆಲ್ಲ ವ್ಯಾಪಿಸಿರುವಾಗ ಅನ್ಯ ವಿಚಾರಗಳಿಗೆ ಆಸ್ಪದವೆಲ್ಲಿಂದ ಬರಬೇಕು?"

"ಸಂಯುಕ್ತೇ, ನೀನು ನನ್ನ ದ್ವೇಷ ಸಂಪಾದಿಸಬೇಕೆಂದು ನನ್ನ ವೈರಿಯನ್ನು ವರಿಸಿದೆಯಾ?"

"ಹಾಗೆ ತಿಳಿಯಬೇಡಿರಿ. ನನ್ನ ಮನಸ್ಸು ಸ್ವಾಭಾವಿಕವಾಗಿ ಅವರಲ್ಲಿ ಲೀನವಾಗಿರುವದು. ನಾನು ಅವರನ್ನು ವರಿಸುವದರಿಂದ ನಿಮ್ಮಲ್ಲಿಯ ದ್ವೇಷಾಸೂಯೆ ಭಾವನೆಗಳ ನಾಶವಾಗಿ, ಆ ಮಹಾನುಭಾವರ ಚಿರಮೈತ್ರಿಯನ್ನು ಸಂಪಾದಿಸುವಿರೆಂದು ತಿಳಿದಿದ್ದೆನು. ತಂದೆಯವರೆ, ನೀವು ದಿಲ್ಲಿಯ ಸಮ್ರಾಟರನ್ನು ದ್ವೇಷಿಸದೆ, ನಿರ್ಮಲ ಮನಸ್ಸಿನಿಂದ ನನ್ನನ್ನು ಅವರಿಗೆ ಧಾರೆಯೆರೆದು ಕೊಟ್ಟು ಕೃತಾರ್ಥರಾಗಿರಿ. ನೀವು ಅವರೊಡನೆ ದೀರ್ಘದ್ವೇಷ ಮಾಡಿದರೆ ಅನರ್ಥವುಂಟಾಗುವದಲ್ಲದೆ, ಅದರಲ್ಲಿ ಫಲವೇನುಂಟು?"

"ಸಂಯುಕ್ತೆ! ನೀಚಮನೋವೃತ್ತಿಯ ಪಿಶಾಚಿಯೆ! ನೀನು ನನಗೆ ಧರ್ಮೋಪದೇಶ ಮಾಡುವೆಯಾ? ನಿನ್ನನ್ನು ನಾನು ಆ ನೀಚ ಪೃಥ್ವಿಗೆ ಕೊಡಲೊಪ್ಪುವದಿಲ್ಲ. ನೀನು ನಾಳಿನ ಸ್ವಯಂವರದಲ್ಲಿ ಮತ್ತೊಬ್ಬ ರಾಜಕುಮಾರನನ್ನು ವರಿಸಲೊಪ್ಪುವೆಯೊ? ಹಾಗೆ ಒಪ್ಪದಿದ್ದರೆ ನಿನ್ನ ಆಯುಷ್ಯದ ಕೊನೆಯ ದಿನವು ಇಂದೇ ಎಂದು ತಿಳಿದುಕೊ! ಸಾರಾಸಾರ ವಿಚಾರ ಮಾಡಿ ಸ್ಪಷ್ಟವಾದ ಅಭಿಪ್ರಾಯವನ್ನೊಮ್ಮೆ ತಿಳಿಸಿಬಿಡು!"

"ಅಪ್ಪಾ, ಇದೊಳ್ಳೆಯ ದುರಾಗ್ರಹ ಬಿಡಿರಿ. ಹೀಗೆ ಚಂಡಿತನ ಮಾಡುವದಿದ್ದರೆ ಸ್ವಯಂವರವನ್ನೇಕೆ ಮಂಡಿಸಬೇಕಾಗಿತ್ತು? ಮೃತ್ಯುವೊದಗಿದರೂ ನನ್ನ ಮನಃಸ್ಥಿತಿಯಲ್ಲಿ ಅಭ್ಯಂತರವಾಗಲಾರದು."

— ೫೫ —

ಜಯಚಂದ್ರನು ಅವಳ ಮಾತುಗಳನ್ನು ಕೇಳಿ ಸಿಟ್ಟಿನಿಂದ ಹುಚ್ಚಾದನು. ಇವಳನ್ನು ಕಡಿದು ಚಲ್ಲಿ ತನ್ನ ಮನಸ್ಸನ್ನು ಸಮಾಧಾನಮಾಡಿಕೊಳ್ಳಬೇಕೆಂದು ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಆಗ ಚಿತ್ರರೇಖೆಯೂ, ವಿಪುಲಾ ದೇವಿಯೂ ಅಡ್ಡಬಂದು, ಅವನ ಕೈಯೊಳಗಿನ ಖಡ್ಗವನ್ನು ಕಸಿದುಕೊಂಡರು. ಆಗ ವಿಪುಲಾದೇವಿಯು ಪತಿಯನ್ನು ಕುರಿತು:—"ಹುಡುಗೆಯು ಅಜ್ಞತನದ ಕೃತಿಯನ್ನು ಮಾಡಿದಳೆಂದು ಇಂತಹ ಅಘೋರವಾದ ಶಾಸನವಿಧಿಸಲುದ್ಯುಕ್ತರಾಗಬೇಕೇ?"

"ಮಹಾರಾಜರೆ, ಕ್ಷಮಿಸಿರಿ; ಸಂಯುಕ್ತಾದೇವಿಯವರ ವಿಷಯಕ್ಕೆ ಶಾಂತ ರಾಗಿರಿ." ಎಂದು ಚಿತ್ರರೇಖೆಯು ನುಡಿಯಲು, ಜಯಚಂದ್ರನು ಕಠೋರ ವಾಣಿ ಯಿಂದ ಸಂಯುಕ್ತೆಯನ್ನು ಕುರಿತು:—"ಸಂಯುಕ್ತೆ! ನೀನು ಜೀವಿಸಿರಬೇಕಾಗಿದ್ದರೆ ಪೃಥ್ವೀರಾಜನನ್ನು ಪ್ರೀತಿಸಕೂಡದು. ಹೇಳು, ಇನ್ನೊಮ್ಮೆ ವಿಚಾರ ಮಾಡಿ ನಿನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸು." ಈಗ ಮಾತ್ರ ಸಂಯುಕ್ತೆಯ ಹೃದ ಯಕ್ಕೆ ಬಲವಾದ ನೋವಾಯಿತು. ಕಂಠವು ಸದ್ಗದಿತವಾಯಿತು. ಧೀರೋದಾತ್ತ ನಾದ ಪೃಥ್ವೀರಾಜನಲ್ಲಿ ತನ್ನ ತಂದೆಯು ಕಾರಣವಿಲ್ಲದೆ ವೈರ ಬಳೆಯಿಸತೊಡಗಿರುವ ನೆಂದು ಅವಳಿಗೆ ವ್ಯಸನವಾಯಿತು. ಆಗ ಅವಳು ನಿಶ್ಚಯಾತ್ಮಕ ಸ್ವರದಿಂದ:— "ತಂದೆಯವರೆ, ನೀವು ಬೇಕಾದದ್ದು ಹೇಳಿರಿ; ಬೇಕಾದಂತಹ ಶಿಕ್ಷೆ ವಿಧಿಸಿರಿ; ನನ್ನ ಮನೋವೃತ್ತಿಯು ಯಾವ ಕಾರಣದಿಂದಲೂ ಬೇರೆಯಾಗಲಾರದು. ದಿಲ್ಲಿಯ ಸಮ್ರಾಟರೇ ನನ್ನ ಹೃದಯ ದೇವತೆಗಳೆಂದು ತಿಳಿದಿರುವೆನು. ನೀವು ಸಂತೋಷ ವೃತ್ತಿಯಿಂದ ಅವರಿಗೆ ನನ್ನನ್ನು ಧಾರೆಯೆರೆದು ಕೊಡದಿದ್ದರೆ ನಾನು ಆಮರಣವಾಗಿ ಅವರ ನಾಮಸ್ಮರಣೆಯಲ್ಲೇ ಕಾಲಕಳೆಯುವೆನು. ಇದೇ ನನ್ನ ನಿಶ್ಚಯ!"

ಸಂಯುಕ್ತೆಯು ಹೀಗೆ ಮಾತನಾಡಿದ ಕೂಡಲೆ ಜಯಚಂದ್ರನು ದಿಙ್ಮೂಢ ನಾದನು. ಇವಳನ್ನು ಕಾರಾಗೃಹದಲ್ಲಿರಿಸಿದರೆ ಕೆಲವು ದಿವಸಗಳ ಮೇಲೆ ತಾನಾಗಿ ಹಾದಿಗೆ ಬರುವಳೆಂದು ಅವನು ತಿಳಿದನು. ಆಗ ಅವನು ತನ್ನ ಪತ್ನಿಯನ್ನು ಕುರಿತು: "ವಿಪುಲೇ, ಈ ಉನ್ಮತ್ತಳನ್ನು ಕೊಂದು ಸ್ತ್ರೀಹತ್ಯಾಪಾತಕ ಕಟ್ಟಿಕೊಳ್ಳುವದಕ್ಕಿಂತ ಆಮರಣವಾಗಿ ಕಾರಾಗೃಹದಲ್ಲಿರಿಸುವದೇ ನನಗೆ ಯೋಗ್ಯ ಕಾಣುವದು. ಹಡೆದವರ ಮನಸ್ಸಿನ ವಿರುದ್ಧವಾಗಿ ವರ್ತಿಸುವ ಮಕ್ಕಳಿಂದ ಪ್ರಯೋಜನವೇನು? ಇವಳು ನನ್ನ ಕಡು ಹಗೆಯನ್ನು ವರಿಸಿ ನನ್ನ ಮನಸ್ಸಿಗೆ ಬಲವಾದ ಗಾಯವನ್ನುಂಟುಮಾಡಿ ದಳು; ಜನರಲ್ಲಿ ಅಪಮಾನಗೊಳಿಸಿದಳು. ಇವಳಿಗೆ ಶಾಸನ ವಿಧಿಸದೆ ಗತ್ಯಂತರವಿಲ್ಲ."

"ನಾನು ಸಂಯುಕ್ತೆಯ ಮನಸ್ಸನ್ನು ತಿರುಗಿಸುವೆನು; ನೀವು ಇವಳನ್ನು ಈಗಲೇ ಕಾರಾಗೃಹದಲ್ಲಿರಿಸಬೇಡಿರಿ. ಇದ್ದ ಒಬ್ಬ ಮಗಳನ್ನು ಸೆರೆಯಲ್ಲಿರಿಸಿ ಹೇಗೆ

ಜೀವಿ..........." ಎಂದು ವಿಪ್ರಲಾದೇವಿಯು ನುಡಿಯುತ್ತಿರಲು, ಅವಳ ಮನದಲ್ಲಿ ಹುದುಗಿದ್ದ ದುಃಖವು ಹೊರಸೂಸಿ ಮಾತಗಳನ್ನು ಕಟ್ಟುಮಾಡಿತು. ಆಗ ಸಂಯುಕ್ತೆಯು ತಾಯಿಯನ್ನು ಕುರಿತು:—

"ಅಮ್ಮಾ, ನನ್ನ ಮನಸ್ಸು ಮೇರುಗಿರಿಯಂತೆ ಅಚಲವಿರುವದು. ನೀವು ಇಲ್ಲದೊಂದು ಹೇಳಿ, ಹಿಂದಿನಿಂದ ತಂದೆಯವರ ರೋಷಕ್ಕೆ ಪಾತ್ರರಾಗುವ ಕಾರಣವಿಲ್ಲ. ನಾನು ಚಹ್ವಾಣ ಸಮ್ರಾಟರಾದ ಪೃಥ್ವೀರಾಜರನ್ನೇ ಪತಿಗಳೆಂದು ಭಾವಿಸಿರುವೆನು."

"ನೋಡಿದೆಯಾ! ಈ ಕರ್ಕಶೆಯು ನನ್ನ ಹೃದಯಜ್ವಾಲೆಯನ್ನು ಹೇಗೆ ಪ್ರಜ್ವಲಿಸುತ್ತಿರುವಳು! ಸಂಯುಕ್ತೆ, ನಿನ್ನನ್ನು ಏನುಮಾಡಲಿ!" ಎಂದು ನುಡಿದು, ತನ್ನ ಸೇವಕರನ್ನು ಕರೆದು:— "ಇವಳನ್ನು ಈಗಲೆ ಕಾರಾಗೃಹದಲ್ಲಿರಿಸಿರಿ!"

ರಾಜಾಜ್ಞೆಯ ಮೇರೆಗೆ ದೂತರು ಸಂಯುಕ್ತೆಯನ್ನು ಸೆರೆಮನೆಯಲ್ಲಿರಿಸಿದರು. ಆ ಮದುವಣಗಿತ್ತಿಯು ಸೆರೆಮನೆಯ ಸೋಬತಿಯಾಗಬೇಕಾಯಿತು! ದೈವಲೀಲೆಯು ವಿಚಿತ್ರವಲ್ಲವೆ?

———

ಮಹಾತ್ಮರ ಮನಸ್ಸು ಮಹತ್ತರವಾದದ್ದಿರುತ್ತದೆ. ಅಲ್ಪ ಕಾರಣಕ್ಕಾಗಿ ಅನರ್ಥ ಮಾಡುವದಕ್ಕೆ ಅವರು ಎಂದೂ ಸಿದ್ಧರಿರುವದಿಲ್ಲ. ಪರಕೀಯರಿಂದ ಅಲ್ಪವಾದ ಅಪರಾಧಗಳು ಘಟಿಸಿದ್ದರೆ ಅವುಗಳನ್ನು ಅವರು ದೊಡ್ಡ ಮನಸ್ಸಿನಿಂದ ಕ್ಷಮಿಸುತ್ತಾರೆ ಸತಿಯ ಸಂದೇಶ. ಪರದುಃಖವು ಅವರಿಗೆ ಬಹು ವ್ಯಥೆಯನ್ನುಂಟು ಮಾಡುತ್ತದೆ. ಎರಡನೆಯವರಿಗೆ ಯಾವ ಬಗೆಯಿಂದಲಾದರೂ ಪೀಡೆಯನ್ನುಂಟು ಮಾಡುವದಕ್ಕೆ ಅವರ ಮನಸ್ಸು ಒಪ್ಪುತ್ತಿರುವದಿಲ್ಲ. ಮಹಾತ್ಮನಾದ ಪೃಥ್ವೀರಾಜನು ಇದೇ ಬಗೆಯ ಸ್ವಭಾವದವನಿದ್ದನು. ಮಾಂಡಲಿಕ ರಾಜನಾದ ಜಯಚಂದ್ರನು ಕಪ್ಪ-ಕಾಣಿಕೆಗಳನ್ನು ತನಗೆ ಕೊಡದಿದ್ದರೂ ಅದನ್ನು ಸಹಿಸಿಕೊಂಡಿದ್ದನು; ಇದಲ್ಲದೆ ರಾಜಸೂಯಯಾಗವನ್ನು ಮಾಡಿ ತಾನೇ ಸಾರ್ವಭೌಮನೆನಿಸಿಕೊಳ್ಳಬೇಕೆಂದು ಅವನು ಸಾಹಸ ನಡೆಯಿಸಿದ್ದಕ್ಕೆ ಪೃಥ್ವೀರಾಜನು ರೋಷಗೊಂಡಿರಲಿಲ್ಲ. ಸ್ವಯಂವರದಲ್ಲಿ ತನ್ನ ಹಾಗು ತನ್ನ ಮೈದುನನಾದ ಸಮರಸಿಂಹನ ಪ್ರತಿಮೆಗಳನ್ನು ಮಾಡಿಸಿ ಜಯಚಂದ್ರನು ದ್ವಾರಪಾಲಕರಂತೆ ಬಾಗಿಲಲ್ಲಿ ನಿಲ್ಲಿಸಿದ್ದನ್ನು ಸಹ ಅವನು ಮನಸ್ಸಿನ ಮೇಲೆ ತೆಗೆದುಕೊಳ್ಳಲಿಲ್ಲ. ಅವನು ಮಾನಧನನಾಗಿದ್ದರೂ, ಅದ್ವಿತೀಯ ರಣೋತ್ಸಾಹಿಯಾಗಿದ್ದರೂ, ಕ್ಷುದ್ರವಾದ ಕಾರಣಕ್ಕಾಗಿ ಪ್ರಜಾಜನರ ನೆತ್ತರವನ್ನು ಭೂಮಿಗೆ ಚೆಲ್ಲುವ

ದಕ್ಕೆ ಹಿಂಜರಿಯುತ್ತಿದ್ದನು. ಅವನು ಪ್ರಜಾವತ್ಸಲನು; ಸರ್ವಭೂತಹಿತರತನು; ಈಶ್ವರೀ ಸೃಷ್ಟಿಯಲ್ಲಿ ಸರ್ವರೂ ಸೌಖ್ಯದಿಂದಿರಬೇಕೆಂಬ ಮನೀಷೆಯುಳ್ಳವನು. ಅಂತೆಯೇ ಅವನು ಜಯಚಂದ್ರನ ದುಷ್ಕೃತಿಗಳನ್ನು ದೊಡ್ಡ ಮನಸ್ಸಿನಿಂದ ಸಹಿಸಿದ್ದನು; ಆದರೆ ಅತಿಶಯವಾದ ಸಹನಶೀಲತೆಯಾದರೂ ಪ್ರಸಂಗವಶಾತ್ ಹಾನಿಯನ್ನುಂಟುಮಾಡುವದಿಲ್ಲವೆ? 'ಶಠಂ ಪ್ರತಿ ಶಾಠ್ಯಂ' ಎಂಬ ತತ್ವದಂತೆ ನಡೆಯದಿದ್ದರೆ ಸಾಗುವ ಬಗೆ ಹೇಗೆ?

ಮನ್ನಾಡಾಕುವು ಕನೋಜದಿಂದ ಬಂದು ಸಂಯುಕ್ತೆಯ ಸಂಬಂಧದ ಎಲ್ಲ ಸಂಗತಿಯನ್ನು ಪೃಥ್ವೀರಾಜನಿಗೆ ತಿಳಿಸಿದನು. ಅವಳು ತನ್ನನ್ನೇ ನಚ್ಚಿರುವದನ್ನೂ, ಸ್ವಯಂವರ ಮಂಟಪದಲ್ಲಿ ತನ್ನ ಪ್ರತಿಮೆಗೇ ಮಾಲೆ ಹಾಕುವಳೆಂಬ ಸಂಗತಿಯನ್ನೂ ತಿಳಿದು ಅವನು ಪರಮಾನಂದವುಳ್ಳವನಾದನು. ಚಿತ್ರರೇಖೆಯು ಅವಳ ವಿಷಯಕ್ಕಾಗಿ ಹೇಳಿದ ಸಂಗತಿಯು ನಿಜವೆಂಬದು ಅವನಿಗೆ ಈಗ ಚನ್ನಾಗಿ ಮನವರಿಕೆಯಾಯಿತು. ಅವನು ಸಂಯುಕ್ತೆಯ ಸದ್ಗುಣಗಳಿಗೆ ಅತ್ಯಂತ ಲುಬ್ಧನಾಗಿ, ಅವಳನ್ನು ಯಾವಾಗ ಕಂಡೇನೋ, ಅವಳ ಸಹವಾಸದಲ್ಲಿ ಭಾವೀ ಆಯುಷ್ಯವನ್ನು ಯಾವಾಗ ಸೌಖ್ಯಮಯ ಮಾಡುವೆನೋ ಎಂದು ಆತುರಗೊಂಡನು. ಸಂಯುಕ್ತೆಯ ಸಹವಾಸದ ಸುವರ್ಣ ಸಂಧಿಯನ್ನು ಬೇಗನೆ ಒದಗಿಸಿಕೊಡುವದಕ್ಕಾಗಿ ಅವನು ಪರಮಾತ್ಮನನ್ನು ಹಗಲಿರುಳೂ ಸ್ಮರಿಸತೊಡಗಿದನು. ಜಯಚಂದ್ರನು ತನ್ನ ಸಲುವಾಗಿ ಎಷ್ಟೇ ದ್ವೇಷಭಾವನೆಯುಳ್ಳವನಾಗಿದ್ದರೂ ಸಂಯುಕ್ತೆಯು ತನ್ನನ್ನು ವರಿಸಿದಳೆಂದರೆ ಆ ದ್ವೇಷವು ನಾಶವಾಗಿ, ಸ್ನೇಹವು ನೆಲೆಗೊಳ್ಳುವದೆಂದು ಅವನು ತನ್ನ ಮನದಲ್ಲಿ ಯಥೇಷ್ಟ ಮಂಡಿಗೆಗಳನ್ನು ತಿನ್ನತೊಡಗಿದ್ದನು. ಲೆಕ್ಕಕೊಡದ ಗೋದಿಯ ಮಂಡಿಗೆಗಳನ್ನು ಎಷ್ಟು ತಿಂದರೂ ಯಾರು ಬೇಡನಬೇಕು? ತಾನೊಂದು ಬಗೆಯುತ್ತಿದ್ದರೆ ದೈವವೊಂದು ಮಾಡುತ್ತಿರುತ್ತದೆಂಬದನ್ನು ಮೊದಲೇ ಯಾರು ಕಂಡು ಹಿಡಿದವರುಂಟು? ಭವಿಷ್ಯವು ಮುಂಚಿತವಾಗಿ ತಿಳಿಯುತ್ತಿದ್ದರೆ ಭಾವೀ ಅನರ್ಥಕ್ಕೆ ಸಂಯುಕ್ತೆಯು ಕಾರಣಳಾಗುತ್ತಿರಲಿಲ್ಲ; ಭಾರತ ಸ್ವಾತಂತ್ರ್ಯದ ಸೂರ್ಯಾಸ್ತವಾಗುತ್ತಿರಲಿಲ್ಲ; ಆರ್ಯ ಸಮ್ರಾಟ್ ಸೂರ್ಯನ ತೇಜೋಮಯಕಿರಣಗಳಿಗೆ ಹಿಂದೂದೇಶವು ಹೊರತಾಗುತ್ತಿರಲಿಲ್ಲ! ದೈವಗತಿಯು ವಿಚಿತ್ರವಲ್ಲವೆ?

ಆರ್ಯಸಮ್ರಾಟನಾದ ಪೃಥ್ವೀರಾಜನು ಶಯನಮಂದಿರದಲ್ಲಿ ಹಂಸತೂಲಿಕಾತಲ್ಪದ ಮೇಲೆ ಒರಗಿದ್ದನು. ದಾಸದಾಸಿಯರು ತಮ್ಮ ಒಡೆಯನಿಗೆ ಆನಂದವಾಗಬೇಕೆಂದು ಬಾಳದಬೇರಿನ ಬೀಸಣಿಕೆಗಳನ್ನು ಸುಗಂಧಯುಕ್ತವಾದ ಪನ್ನೀರಲ್ಲಿದ್ದಿ ಗಾಳಿ ಹಾಕತೊಡಗಿದ್ದರು. ಎದುರಿನ ಸಮೆಗಳಲ್ಲಿ ಸುಗಂಧತೈಲದ ದೀಪಗಳು

ನಿಶ್ಚಲವಾಗಿ ಉರಿಯುತೊಡಗಿದ್ದವು. ಪೃಥ್ವೀರಾಜನಿಗೆ ಈ ಎಲ್ಲ ಬಾಹ್ಯ ಸಂಗತಿಗಳ ಕಡೆಗೆ ಲೇಶಾಂಶವಾದರೂ ಲಕ್ಷ್ಯವಿದ್ದಿಲ್ಲೆಂಬಂತೆ ಅವನ ಮುಖಚರ್ಯೆಯ ಮೇಲಿಂದ ಸ್ಪಷ್ಟವಾಗಿ ತಿಳಿದು ಬರುವಂತಿತ್ತು. ಅವನಿಗೀಗ ಸಂಯುಕ್ತೆಯ ಹೊರತು ಅನ್ಯ ಧ್ಯಾಸವೇ ಇದ್ದಿಲ್ಲವೆಂದು ಹೇಳಬಹುದು; ತಾನು ತಿಳಿಸಿದ ಮೇರೆಗೆ ಅವಳು ಮನ್ನಾನೊಡನೆ ಹೊರಟು ಬಂದಿದ್ದರೆ ಒಳಿತಾಗುತ್ತಿತ್ತೆಂದು ಅವನು ಮನಸ್ಸಿನಲ್ಲಿ ಅನ್ನತೊಡಗಿದ್ದನು. ಜಯಚಂದ್ರನು ತನ್ನೊಡನೆ ದೀರ್ಘದ್ವೇಷ ಮಾಡುತ್ತಿದ್ದುದರಿಂದ, ಅವಳ ಮನಸ್ಸಿನ ವಿರುದ್ಧವಾಗಿ ಯಾವನೊಬ್ಬ ರಾಜಪುತ್ರನಿಗೆ ಅವಳನ್ನು ಬಲಾತ್ಕಾರದಿಂದ ಧಾರೆಯೆರೆದು ಕೊಟ್ಟರೆ, ತನ್ನ ಮನೋರಥವು ಮಣ್ಣುಗೂಡುವದೆಂದು ಅವನು ಭಯಗೊಂಡಿದ್ದನು. ಚಿತ್ರರೇಖೆಯು ಹೇಳಿದ ಮೇರೆಗೆ ಅವಳು ತನ್ನಲ್ಲಿ ಪ್ರಣಯವುಳ್ಳವಳಾಗಿದ್ದರೆ ಇಂತಹ ಕೃತಿಯು ಘಟಿಸುವದಕ್ಕೆ ಆಸ್ಪದವಾಗಲಿಕ್ಕಿಲ್ಲವೆಂದೂ ಪರಕ್ಷಣದಲ್ಲಿ ಧೈರ್ಯತಾಳಿದನು. ಅವನ ಮನಸ್ಸು ಅನೇಕ ಬಗೆಯ ವಿಚಾರಗಳಿಂದ ಚಂಚಲವಾಗಿತ್ತು; ಅತ್ಯಂತ ಉದ್ವಿಗ್ನತೆಯನ್ನು ಹೊಂದಿತ್ತು. ಮಾನ-ಮರ್ಯಾದೆಗಳ ಲಹರಿಗೆ ಬಿದ್ದು ಸ್ವಯಂವರಕ್ಕೆ ಹೋಗುವದನ್ನು ಬಿಟ್ಟದ್ದು ಅಯುಕ್ತವಾಯಿತೆಂದು ಅವನು ಬಗೆದನು. ತಾನು ಸ್ವಯಂವರಕ್ಕೆ ಹೋಗಿದ್ದರೆ ತನ್ನ ಪ್ರಿಯತಮೆಯು ಎಲ್ಲರ ಕಣ್ಣಾರೆ ತನಗೆ ಮಾಲೆ ಹಾಕುತ್ತಿದ್ದಳೆಂದೂ, ಜಯಚಂದ್ರನು ದ್ವೇಷಾಸೂಯೆಗಳನ್ನು ತ್ಯಜಿಸಿ ತನ್ನೊಡನೆ ಸ್ನೇಹಭಾವ ತಳೆಯುತ್ತಿದ್ದನೆಂದೂ ಅವನು ಭಾವಿಸಿದನು. ದೊಡ್ಡಿಸ್ತಿಕೆಗಾಗಿ ಕನೋಜಕ್ಕೆ ಹೋಗುವದನ್ನು ಬಿಟ್ಟದ್ದರಿಂದ, ಲಾವಣ್ಯಮಯಿಯಾದ ತನ್ನ ಹೃದಯದೇವತೆಯ ಸ್ವರ್ಗೀಯ ಮೂರ್ತಿಯ ದರ್ಶನಕ್ಕೆ ಇದುವರೆಗೂ ಎರವಾಗಬೇಕಾಯಿತೆಂದು ಅವನು ಪಶ್ಚಾತ್ತಾಪಬಡತೊಡಗಿದನು.

ಸಂಯುಕ್ತೆಯು ನನ್ನ ಪ್ರತಿಮೆಗೆ ಮಾಲೆ ಹಾಕಿರುವಳಲ್ಲವೆ? ಜಯಚಂದ್ರನು ಒಳ್ಳೆಯ ಮನ್ನಣೆಯಿಂದ ನನ್ನನ್ನು ಕರೆಯಿಸಿ ಅವಳನ್ನು ಒಪ್ಪಿಸಬಹುದಲ್ಲವೆ? ಅವಳು ಯೋಗ್ಯವಾದ ವರನನ್ನು ವರಿಸಿದ್ದಕ್ಕಾಗಿ ವಿಪುಲಾದೇವಿಗೂ ಜಯಚಂದ್ರನಿಗೂ ಆನಂದವಾಗಿರಬಹುದಲ್ಲವೆ? ಇನ್ನು ಬೇಗನೆ ಸದ್ಗುಣನಿಧಿಯಾದ ಸಂಯುಕ್ತೆಯ ಸಂಯೋಗವಾಗಿ ಕೃತಕೃತ್ಯನಾಗುವೆನಲ್ಲವೆ? ಎಂದು ಪೃಥ್ವೀರಾಜನು ಭ್ರಾಮಕವಾದ ಕಲ್ಪನೆಗಳಿಂದ ಆನಂದಬಡತೊಡಗಿದ್ದನು. ಅಷ್ಟರಲ್ಲಿ ಚರನೊಬ್ಬನು ಬಂದು "ಜೀಯಾ, ಕನೋಜದಿಂದ ಚಿತ್ರರೇಖಾದೇವಿಯವರು ಬಂದಿರುವರು."

ಚರನ ಈ ಮಾತುಗಳನ್ನು ಕೇಳಿದ ಕೂಡಲೆ ಪೃಥ್ವೀರಾಜನು ಚಟ್ಟನೆ ಎದ್ದು ಕುಳಿತು:—"ಏನು? ಚಿತ್ರರೇಖೆ ಬಂದಿರುವಳೆ?"

"ಹೌದು; ಮಹಾರಾಜರೆ, ಬಂದಿರುವರು."

"ಅವಳನ್ನು ಬೇಗನೆ ಕರೆದುಕೊಂಡು ಬಾ."

ಪೃಥ್ವೀರಾಜನು ಹೀಗೆ ನುಡಿದ ಕೂಡಲೆ ಆ ದೂತನು ಚಿತ್ರರೇಖೆಯನ್ನು ಅಲ್ಲಿಗೆ ಕರೆತಂದನು. ಆಗ ಪೃಥ್ವೀರಾಜನು ಆತುರತೆಯಿಂದ:—"ಚಿತ್ರರೇಖೇ, ಕನೋಜದಿಂದ ಬಂದೆಯಾ? ಬಾ, ಕುಳಿತುಕೋ" ಎಂದು ಅವಳನ್ನು ಅಲ್ಲಿಯೇ ಇದ್ದ ಒಂದು ಆಸನದಲ್ಲಿ ಕುಳಿತುಕೊಳ್ಳ ಹೇಳಿ:—"ನಿನ್ನ ಗೆಳತಿಯು ಸುಖರೂಪ ನಾಗಿರುವಳೇ? ಸ್ವಯಂವರವು ಸುಸೂತ್ರವಾಗಿ ಸಾಗಿತೇ?"

"ಮಹಾರಾಜರೆ, ಎಲ್ಲವೂ ಅನರ್ಥವಾಗತೊಡಗಿರುವದು."

"ಚಿತ್ರರೇಖೇ, ಇದೇನು ಹೇಳುವೆ? ಯಾಕೆ, ಅಂತಹ ಸಂಗತಿಯೇನು ಘಟಿಸಿರುವದು?" ಎಂದು ಪೃಥ್ವೀರಾಜನು ಗಾಬರಿಯಿಂದ ಕೇಳಿದನು. ಆಗ ಚಿತ್ರರೇಖೆಯು ಶೋಕಸಂವಿಗ್ನಮನಸ್ಕಳಾಗಿ:—

"ಸಂಯುಕ್ತಾದೇವಿಯವರು ನಿಮ್ಮ ಪ್ರತಿಮೆಯ ಕೊರಳಲ್ಲಿ ಮಾಲೆ ಹಾಕಿದ್ದರಿಂದ, ಜಯಚಂದ್ರ ಮಹಾರಾಜರು ಅವರ ಮೇಲೆ ಖತಿಗೊಂಡು ಅವರನ್ನು ಕಾರಾಗೃಹದಲ್ಲಿ ಹಾಕಿರುವರು. ಮತ್ತೊಬ್ಬ ರಾಜಪುತ್ರನನ್ನು ವರಿಸಲೊಪ್ಪಿದರೆ ಮಾತ್ರ ಬಂಧವಿಮೋಚನೆಮಾಡುವೆವೆಂದೂ, ಇಲ್ಲದಿದ್ದರೆ ಆಮರಣ ಸೆರೆಮನೆಯ ಸಂಗಾತಿಯಾಗಿರಬೇಕಾಗುವನೆಂದೂ ಅವರು ತಮ್ಮ ಪುತ್ರಿಗೆ ಸ್ಪಷ್ಟವಾಗಿ ಹೇಳಿರುವರು."

ಚಿತ್ರರೇಖೆಯ ಈ ಮಾತುಗಳು ಪೃಥ್ವೀರಾಜನ ಹೃದಯಕ್ಕೆ ಶಲ್ಯದಂತೆ ಚುಚ್ಚತೊಡಗಿದ್ದವು. ಅವನು ಈ ದುಷ್ಟವಾರ್ತೆಯಿಂದ ಕಡುದುಃಖಿತನಾದನು. ಇಷ್ಟುಹೊತ್ತಿನ ವರೆಗೆ ಮಾಡಿಕೊಂಡಿದ್ದ ಮನೋರಾಜ್ಯವು ವ್ಯರ್ಥವಾದದ್ದೆಂದು ಈಗ ಅವನು ತಿಳಿದನು. ಸಂಯುಕ್ತೆಯು ತನ್ನವಳಾಗುವಳೆಂದು ಸ್ವಾನಂದಗಿರಿಯ ಅತ್ಯುಚ್ಚವಾದ ಶಿಖರವನ್ನೇರಿದ್ದ ಅವನು ಪ್ರಬಲವಾದ ಕಂಟಕದಿಂದ ದುಃಖ ಗರ್ತದಲ್ಲಿ ಬಿದ್ದು ತೊಳಲಾಡತೊಡಗಿದನು. ನಿರಾಶೆಯಿಂದ ಅವನ ಕೋಮಲವಾದ ಮನೋದ್ಯಾನವು ಕಮರತೊಡಗಿತು. ಸಂಯುಕ್ತೆಯು ನಿಶ್ಚಯವಾಗಿಯೂ ತನ್ನನ್ನು ತೊಲಗಿದಳೆಂದು ಆವನು ದೀರ್ಘನಿಶ್ವಾಸ ಬಿಟ್ಟನು.

"ಚಿತ್ರರೇಖೆ, ನಾನು ಸಂಯುಕ್ತೆಯ ಆಶೆಯನ್ನು ಸಂಪೂರ್ಣ ಬಿಡಬೇಕೆನ್ನುನೆಯಾ?" ಎಂದು ಪೃಥ್ವೀರಾಜನು ಅತೀವ ನೈರಾಶ್ಯೆಯಿಂದ ಕೇಳಿದನು.

"ಮಹಾರಾಜರೆ, ನೀವು ಹೀಗೇಕೆ ನಿರಾಶೆ ತಳೆಯುವಿರಿ? ಸಂಯುಕ್ತಾದೇವಿಯವರು ಆಜೀವವಾಗಿ ನಿಮ್ಮವರೇ ಇರುವರು. ಜೀವಹೋಗುವ ವರೆಗೂ ಅವರು ತಮ್ಮ ಧೃಢನಿಶ್ಚಯ ಬಿಡಲಾರರು; ಶೀಲಚ್ಯುತಿ ಹೊಂದಲಾರರು."

" ಜಯಚಂದ್ರರು ತಮ್ಮ ವಾತ್ಸಲ್ಯದ ಪುತ್ರಿಯ ಮನಸ್ಸಿನಂತೆ ನಡೆಯುವದಕ್ಕೆ ಸಿದ್ಧರಾಗಬಹುದೇ?"

" ಆ ಮಾತು ಎಂದೂ ಆಗದು. ಅವರು ನಿಮ್ಮ ವಿಷಯಕ್ಕೆ ದೀರ್ಘದ್ವೇಷ ತಾಳಿರುವರು."

" ನಾನು ಅಂತಹ ಅಪರಾಧವನ್ನೇನು ಮಾಡಿದ್ದೇನಾದೀತು?" ಎಂದು ಪೃಥ್ವೀರಾಜನು ನುಡಿದು, ನಿಟ್ಟುಸಿರು ಬಿಟ್ಟು :—" ಚಿತ್ರರೇಖೇ, ಹೀಗಿದ್ದ ಮೇಲೆ ಸಂಯುಕ್ತೆಯ ನಿಶ್ಚಯದ ಉಪಯೋಗವೇನು?"

" ಯಾಕೆ? ನೀವು ನಿಮ್ಮ ಪ್ರಿಯತಮೆಯನ್ನು ಬಂಧಮುಕ್ತ ಮಾಡಲಾರಿರಾ?"

" ಹಾಗೆ ಮಾಡುವದರಿಂದ ಜಯಚಂದ್ರರ ವೈರಾಗ್ನಿಯು ಮತ್ತಿಷ್ಟು ಪ್ರಜ್ವಲಿಸಲಿಕ್ಕಿಲ್ಲವೆ? ಅದರ ಪರ್ಯವಸಾನವು ಅತ್ಯಂತ ಭಯಂಕರವಾದ ಪರಿಸ್ಥಿತಿಯಲ್ಲಿ ಪರಿಣಮಿಸಲಿಕ್ಕಿಲ್ಲವೆ? ಚಿತ್ರರೇಖೇ, ಕ್ಷುದ್ರ ವ್ಯಾಮೋಹದ ಬಲೆಯಲ್ಲಿ ಸಿಲುಕಿ, ಹೊತ್ತುತ್ತಿರುವ ಗೃಹಕಲಹಾಗ್ನಿಗೆ ಎಣ್ಣೆಯನ್ನೆರಚಲಾರೆ. ಪ್ರಜಾರಕ್ತದಿಂದ ದೂಷಿತವಾದ ಸುಖೋಪಭೋಗಗಳನ್ನು ಉಣ್ಣಲಾರೆ."

ನಿಶ್ಚಯಾತ್ಮಕ ಸ್ವರದಿಂದ ಉಸಿರುಗರೆಯುತ್ತ ಪೃಥ್ವೀರಾಜನು ಹೀಗೆ ಮಾತನಾಡಿದ್ದನ್ನು ಕೇಳಿ ಚಿತ್ರರೇಖೆಯು ಬೆರಗಾದಳು. ಶೂರನೂ, ಗಂಭೀರನೂ ಆದ ಇವನು ಸಂಯುಕ್ತೆಯ ಬಂಧಮುಕ್ತಮಾಡಿ, ಅವಳ ದುಃಖವನ್ನು ಪರಿಹರಿಸುವನೆಂದು ಭಾವಿಸಿದ್ದ ಚಿತ್ರರೇಖೆಯು ಈ ಮಾತುಗಳಿಂದ ವ್ಯಥೆಗೊಂಡಳು. ನಂಬಿ ನೆಚ್ಚಿದ್ದ ಅಬಲೆಯ ಗೋಣು ಮುರಿಯುವದಕ್ಕೆ ಇವನು ಸಿದ್ಧನಾದನೆಂದು ಅವಳು ತ್ವೇಷಗೊಂಡಳು.

" ಮಹಾರಾಜರೆ, ಕ್ಷಾತ್ರಧರ್ಮದಲ್ಲಿ ಜನಿಸಿ ರಾಜ್ಯಶಕಟ ನಡೆಯಿಸ ತೊಡಗಿದ ಮೇಲೆ ರಕ್ತಪಾತಕ್ಕೆ ಅಂಜಿದರೆ ನಡೆಯುವದೆ? ರಕ್ತಪಾತ-ಹಿಂಸೆಗಳಿಗೆ ಅಂಜುತ್ತ ಹೋದರೆ, ನಿಮ್ಮ ಕೈಯೊಳಗಿನ ರೊಟ್ಟಿಯು ನಿಮ್ಮ ಬಾಯಿಯಲ್ಲಿ ಬೀಳುವದೇ ಕಠಿಣವಾದೀತು. ಇಂದು ರಾಜರಿದ್ದವರು ಈ ಗುಣದಿಂದ ನಾಳೆ ಪದಭ್ರಷ್ಟರಾಗಬಹುದು. ರಾಜಕಾರಣದಲ್ಲಿ ಇಂತಹ ವೈರಾಗ್ಯವಿದ್ದರೆ ಜೀವಿಸಿರುವದು ಕಠಿಣವಾದೀತು. ಇಂತಹ ಗುಣಗಳನ್ನು ಅವಲಂಬಿಸಿದರೆ ಪ್ರಜಾ ಜನರಿಗೆ ಸುಖಸ್ವಾತಂತ್ರ್ಯಗಳು ಲಭಿಸಬಹುದೆ? ಅರಣ್ಯದಲ್ಲಿದ್ದು ಈಶಚಿಂತನೆ ಮಾಡುವವರಿಗೆ ಇಂತಹ ಗುಣವು ಶೋಭಿಸುವದು. ಒಬ್ಬ ನಿರಪರಾಧಿನಿಯಾದ ಅಬಲೆಯು ಕಾರಾಗೃಹದಲ್ಲಿ ಬಿದ್ದು ನಿಷ್ಕಾರಣವಾಗಿ ಜೀವ ಬಿಡುವದನ್ನು ನೀವು ಕಣ್ಣಿನಿಂದ ನೋಡುವಿರಾ? ನಿರಪರಾಧಿಗಳಿಗೆ ದುಃಖಕೊಡುವವರಿಗೆ ಯೋಗ್ಯ ದಂಡನೆ ವಿಧಿಸದಿದ್ದರೆ, ಸಜ್ಜನರು ಬಾಳುವದೇ ದುಸ್ತರವಾದೀತು. ಪ್ರಜಾಸೌಖ್ಯಕ್ಕಾಗಿ ರಾಜನು ಯತ್ನಿಸಬೇಕಲ್ಲವೆ?

ಯಾವ ರಾಜ್ಯದಲ್ಲಿ ಪ್ರಜೆಗಳಿಗೆ ದುಃಖವಿರುವದೋ, ಯಾವ ರಾಜ್ಯದಲ್ಲಿ ಪ್ರಜಾ ಜನರಿಗೆ ಸ್ವಾತಂತ್ರ್ಯವಿಲ್ಲವೋ, ಯಾವ ರಾಜ್ಯದಲ್ಲಿ ಅನ್ಯಾಯದಿಂದ ಪ್ರಜಾಹಿಂಸೆ ಯಾಗುವದೋ ಅಂತಹ ರಾಜ್ಯದ ರಾಜನಿಗೆ ಯೋಗ್ಯ ಶಾಸನ ವಿಧಿಸುವದು ಸಾರ್ವ ಭೌಮ ರಾಜರಾದ ನಿಮ್ಮ ಕರ್ತವ್ಯವಲ್ಲವೆ? ಸ್ವಯಂವರಕ್ಕೆ ಸಮ್ಮತಿಯಿತ್ತು, ತನಗೆ ಬೇಕಾದ ಪತಿಯನ್ನು ವರಿಸಿದ್ದಕ್ಕಾಗಿ ಶಾಸನ ಮಾಡುವದು ನ್ಯಾಯಸಮ್ಮತವೆನಿ ಸುವದೆ? ಮಹಾರಾಜರೆ, ರಾಜನೀತಿ ನಿಪುಣರಾದ ನಿಮಗೆ ಅಬಲೆಯಾದ ನಾನು ಹೆಚ್ಚಿಗೇನು ಹೇಳಲಿ? ನಿಮ್ಮ ಸಲುವಾಗಿ ಸಂಯುಕ್ತಾದೇವಿಯವರು ಜೀವಿಸಿರು ವರು. ತಮ್ಮ ಆತ್ಮಹತ್ಯೆಯಿಂದ ನಿಮ್ಮ ಮನಸ್ಸಿಗೆ ಘನತರವಾದ ದುಃಖವೊದಗುವ ದೆಂದು ಅವರು ಕಾರಾಗೃಹವನ್ನು ಅನುಭವಿಸುತ್ತಿರುವರು."

ಚಿತ್ರರೇಖೆಯ ಮಾತುಗಳು ಪೃಥ್ವೀರಾಜನ ಮೇಲೆ ಒಳ್ಳೆಯ ಪರಿಣಾಮ ವನ್ನುಂಟುಮಾಡಿದವು. ಅವನು ಎಷ್ಟೋ ಹೊತ್ತಿನವರೆಗೆ ತಟಸ್ಥನಾಗಿ ಕುಳಿತು ಯೋಚಿಸಿದನು. ಆ ಬಳಿಕ ಚಿತ್ರರೇಖೆಯು ಮತ್ತೆ:—"ಮಹಾರಾಜರೇ, ಇಗೊಳ್ಳಿರಿ; ನಿಮ್ಮ ಪ್ರಿಯತಮೆಯ ಸಂದೇಶವನ್ನಷ್ಟು ನೋಡಿರಿ. ಆ ಸತಿಯ ಸಂದೇಶವನ್ನು ಇದೇ ಕೊನೆಯದಾಗಿ ಮಾಡುವಿರೋ, ಕರ್ತವ್ಯಪ್ರಭಾವದಿಂದ ಬಂಧವಿಮೋ ಚನೆಯ ಪುಣ್ಯಭಾಗಿಗಳಾಗಿ ಸೌಖ್ಯಪಡೆಯುವಿರೋ?"

ಹೀಗೆ ನುಡಿದು ಚಿತ್ರರೇಖೆಯು ಸಂಯುಕ್ತೆಯ ಪತ್ರವನ್ನು ಅವನ ಕೈಯಲ್ಲಿ ಕೊಟ್ಟಳು. ಪ್ರಿಯಸತಿಯ ಸಂದೇಶವೇನಿರುವದೋ ನೋಡಬೇಕೆಂದು ಅವನು ಅದನ್ನು ತೆಗೆದುಕೊಂಡು ಓದತೊಡಗಿದನು:—

ಪ್ರಿಯಸಖಾ!

ತಮ್ಮ ಚರಣ ದರುಶನವು ನನಗೆ ಇದುವರೆಗೂ ಆಗಲಿಲ್ಲ; ನೀವು ಈ ಹತ ಭಾಗಿನಿಯ ಮುಖವನ್ನಾದ ನೋಡಿಲ್ಲ. ವಸ್ತುಸ್ಥಿತಿಯು ಹೀಗಿದ್ದರೂ ಪರಸ್ಪರ ರಲ್ಲಿ ದೃಢವಾದ ಸ್ನೇಹ ನೆಲೆಗೊಂಡದ್ದನ್ನು ನೋಡಿದರೆ ಪೂರ್ವ ಜನ್ಮದ ಪ್ರೇಮ ಸಂಬಂಧದ ದೃಶ್ಯವು ಕಣ್ಣಮುಂದೆ ಕಟ್ಟಿದಂತಾಗುವದು.

ಪ್ರಿಯಕರಾ! ಎಂತಹ ಬಂಧನದಲ್ಲಿ ಸಿಲುಕಿದ್ದರೂ, ದುರ್ಧರವಾದ ಗಂಡಾಂ ತರಗಳೊದಗುವವೆಂದು ನಿಶ್ಚಿತವಿದ್ದರೂ ನೆಲಿಸಿದ ಪ್ರೇಮವನ್ನು ಕಿತ್ತುವದಾಗದ್ದನ್ನು ನೋಡಿದರೆ, ಪ್ರಣಯವು ಎಂತಹ ಅಜೇಯವೆಂಬದು ಯಾರ ದೃಷ್ಟಿಪಥದಲ್ಲಾದರೂ ಬಾರದಿರದು.

ಪ್ರಾಣನಾಥ! ತಾಯಿಯು ಹಳಿಯಲಿ, ತಂದೆಯು ಬಡಿಯಲಿ, ನೆರೆಹೊರೆ ಯವರು ಚೇಷ್ಟಿಸಲಿ, ಗೆಳತಿಯರು ತಿರಸ್ಕರಿಸಲಿ, ಪೌರಜನರು ನಗಲಿ; ನಾನು ಯಾರ

ಮೂರ್ತಿಗೆ ಮಾಲೆ ಹಾಕಿರುವೆನೋ ಅವರನ್ನೇ ವರಿಸುವೆನು. ಅದು ಪ್ರಯತ್ನ ಸಾಧ್ಯವಲ್ಲದಿದ್ದರೆ ಅವರ ನಾಮಸ್ಮರಣೆಯಲ್ಲೇ ಶೇಷಾಯುಷ್ಯ ಕಳೆಯುವದು ನನಗೆ ಅಸಾಧ್ಯವಲ್ಲವೆಂಬ ಮಾತು ಜನನಿದರ್ಶಕ್ಕೆ ಬೇಗನೆ ಬಾರದಿರದು.

ಹೃದಯ ದೈವತಾ! ತಮ್ಮ ಪೂಜೆಗಾಗಿ ಬಾಳಿರುವೆನು; ತಮ್ಮ ಮೃದುತರವಾದ ಮುಖಕ್ಕೆ ನೋವಾದೀತೆಂದು ಕಾರಾಗೃಹ ದುಃಖವನ್ನು ಸಹಿಸುತ್ತಲಿರುವೆನು. ತಮ್ಮ ನಾಮಸ್ಮರಣೆಯಿಂದ ನನಗೆ ಈ ಕಾರಾಗೃಹದಲ್ಲಿ ಸಹ ಸ್ವರ್ಗೀಯವಾದ ಆನಂದವಾಗುತ್ತಲಿರುವದು.

ಜೀವನಸರ್ವಸ್ವರೆ! ತಮ್ಮ ನಾಮಸಂಕೀರ್ತನೆಯಲ್ಲಿ ಆನಂದಬಡುವ ಭಾಗ್ಯದ ದಿವಸಗಳು ಬಹಳವಿರಲಿಕ್ಕಿಲ್ಲವೆಂದು ಮನೋಜನ ಸಾಕ್ಷಿಯಿಂದ ನನಗೆ ಗೊತ್ತಾಗಿದೆ. ಪ್ರಾಕ್ತನ ವಿಶೇಷದಿಂದ ದೈವಾಘಾತಕ್ಕೆ ಒಳಪಟ್ಟಿದ್ದರೂ, ಮುಂದಿನ ಜನ್ಮದಲ್ಲಾದರೂ ತಾವೇ ಪತಿಗಳಾಗಬೇಕೆಂದು ಇಚ್ಛಿಸಿದ ಹೊರತು ಅಬಲೆಯಾದ ನಾನು ಹೆಚ್ಚಿಗೆ ಮಾಡಲೇನು?

ಪರಮಾತ್ಮನ ಅನುಗ್ರಹವಿದ್ದರೆ ಮಣ್ಣು ಚಿನ್ನವಾಗಬಹುದು; ವಿಷವು ಅಮೃತವಾಗಬಹುದು. ಹಾಗಿಲ್ಲದಿದ್ದರೆ ಇದೇ ಕಡೆಯ ಸಂದೇಶವು!

ತಮ್ಮ ಚರಣದಾಸಿ,
ಸಂಯುಕ್ತೆ.”

ಪೃಥ್ವೀರಾಜನು ಆ ಪತ್ರವನ್ನೊಮ್ಮೆ ಚುಂಬಿಸಿದನು; ಎದೆಗೆ ಅವಚಿಕೊಂಡನು; ಹಾಗು ಆನಂದ-ದುಃಖಗಳ ಸಮರಸ ಭಾವದಿಂದ ಪರವಶನಾದನು!

---

**ಕೃತಘ್ನತೆ.**

ಸ್ಥಾನೇಶ್ವರದ ಯುದ್ಧದಲ್ಲಿ ಅಪಜಯ ಹೊಂದಿ ಪೃಥ್ವೀರಾಜನಲ್ಲಿ ಕ್ಷಮೆ ಬೇಡಿ, ಒಡಂಬಡಿಕೆ ಮಾಡಿಕೊಂಡದ್ದಕ್ಕಾಗಿ ಶಹಾಬುದ್ದಿನ ಘೋರಿಯು ಮುಖಭಂಗಿತನಾಗಿದ್ದನು. ಗಿಝುನೀ ಮಹಮ್ಮದನು ಹದಿನೇಳು ಸಾರೆ ದಂಡೆತ್ತಿ ಹೋಗಿ ಹಿಂದುಸ್ತಾನದಲ್ಲಿ ಕಡೆತನಕ ವಿಜಯಶಾಲಿಯಾಗಿದ್ದು, ತಾನು ಮಾತ್ರ ಪೃಥ್ವೀರಾಜನಿಂದ ಎರಡು ಸಾರೆ ಪರಾಭೂತನಾಗಿದ್ದನು. ಗಿಝುನೀ ಮಹಮ್ಮದನ ಸೈನಿಕರು ಸ್ವಾಭಿಮಾನದಿಂದ ಕಾದುತ್ತಿದ್ದರೆಂದೂ, ತನ್ನ ಸೈನಿಕರು ಜೀವಗಳ್ಳರಾಗಿ, ಮನಮುಟ್ಟಿ ಯುದ್ಧ ಮಾಡದೆ ತನ್ನನ್ನು ಪರಾಜಯ ಪಡಿಸುವದಕ್ಕೆ ಕಾರಣರಾಗಿರುವರೆಂದೂ ಅವನು ಗ್ರಹಿಸಿದನು. ತನ್ನ ಸೈನಿಕರಿಗೆ ಯೋಗ್ಯ ಶಾಸನ ವಿಧಿಸಿದ ಹೊರತು ಹಿಂದುಸ್ತಾನದಲ್ಲಿ ಜಯ ಸಂಪಾದನೆಯಾಗದೆಂದು ಅವನು ನಿಶ್ಚಯಿಸಿಕೊಂಡನು. ಅವನು ತನ್ನ ಸೈನಿಕ

ರಿಗೂ ಪ್ರಸಿದ್ಧರಾದ ಸರದಾರ ಸೇನಾಪತಿಗಳೂ ಅಪಮಾನಕಾರಕವಾದ ದಂಡನೆಗಳನ್ನು ವಿಧಿಸಿದನು. ಕೆಲವರ ಬಾಯಿಗೆ ತೋಬರಿ ಕಟ್ಟಿಸಿ ಗಿರ್ಘಸೀ ರಾಜಧಾನಿಯ ತುಂಬ ಮೆರೆಯಿಸಿದ್ದನು; ಮತ್ತೊಮ್ಮೆ ರಣಭೂಮಿಯಿಂದ ಪಲಾಯನ ಮಾಡಿದರೆ ದೇಹಾಂತ ಶಾಸನ ವಿಧಿಸಲ್ಪಡುವದೆಂದು ಎಲ್ಲ ಸೇನಾನಾಯಕರಿಗೂ ಸೈನ್ಯಕ್ಕೂ ತಿಳಿಸಿದನು.

ಪೃಥ್ವೀರಾಜನು ವಿಶ್ವಧರ್ಮವನ್ನು ನೆನೆದು ತನಗೆ ಜೀವದಾನ ಕೊಟ್ಟದ್ದನ್ನೂ, ಅತ್ಯಂತ ಮರ್ಯಾದೆಯಿಂದ ನಡೆಯಿಸಿಕೊಂಡದ್ದನ್ನೂ ಶಹಾಬುದ್ದೀನನು ಮರೆತಿದ್ದನು. ಪೃಥ್ವೀರಾಜನನ್ನು ಸಮರಾಂಗಣದಲ್ಲಿ ಸೋಲಿಸಿ, ಅವನ ಜೀವವನ್ನು ಹೀರಿದ ಹೊರ್ತು ತನ್ನ ಮನಸ್ಸಿಗೆ ಸಮಾಧಾನವಾಗುವಂತಿಲ್ಲವೆಂದು ಘೋರಿಯು ಅನ್ನತೊಡಗಿದ್ದನು. ತಾನು ಕೊಟ್ಟ ವಚನವನ್ನೂ ಒಡಂಬಡಿಕೆಯ ಕಟ್ಟಳೆಗಳನ್ನೂ ಅವನು ಇಷ್ಟರಲ್ಲಿಯೇ ಮರೆತುಬಿಟ್ಟನು. ಪೃಥ್ವೀರಾಜನಿಗೆ ತನ್ನನ್ನು ಕಾರಾಗೃಹದಲ್ಲಿರಿಸುವದಾಗಲಿ, ಕ್ರೂರತನದಿಂದ ಕೊಲೆ ಮಾಡಿಸುವದಾಗಲಿ ಅಸಾಧ್ಯವಾಗಿರದೆ, ಸ್ಥಿರವಾದ ಸ್ನೇಹದಿಂದ ಬದ್ಧನನ್ನಾಗಿ ಮಾಡುವದರಿಂದ ಉಭಯತರಿಗೂ ಸುಖಕರವೆಂದು ತಿಳಿದು ಬಂಧವಿಮೋಚನೆ ಮಾಡಿರುವನೆಂಬವನ್ನು ಅವನು ಈಗಾಗಲೆ ಮರೆತಿದ್ದನು. ಅದರಿಂದಲೇ ಈ ಸಾರೆ ಯುದ್ಧಸೌರಣೆಯನ್ನು ಚೆನ್ನಾಗಿ ಮಾಡಿ ಪೃಥ್ವೀರಾಜನ ಮೇಲೆ ಮತ್ತೆ ದಂಡೆತ್ತಿ ಹೋಗಬೇಕೆಂದು ಅವನು ಗೊತ್ತು ಮಾಡಿಕೊಂಡಿದ್ದನು.

ಒಮ್ಮೆಯಲ್ಲವೆಂದರೆ ಎರಡಾವೃತ್ತಿ ಅಪಜಯವೊದಗಿದ್ದರಿಂದ, ಸ್ವತಂತ್ರವಾಗಿ ಪೃಥ್ವೀರಾಜನೊಡನೆ ಯುದ್ಧ ಮಾಡುವದಕ್ಕೆ ಶಹಾಬುದ್ದೀನನು ಅಂಜತೊಡಗಿದ್ದನು. ಅವನಿಗೆ ಏತದ್ದೇಶೀಯ ಅರಸರ ಸಹಾಯವು ಆವಶ್ಯಕವೆನಿಸಿತು. ತನಗೆ ಯಾರು ಸಹಾಯ ಮಾಡಬಹುದೆಂದು ಅವನು ನಾನಾ ವಿಧವಾಗಿ ಯೋಚಿಸತೊಡಗಿದನು. ಜಯಚಂದ್ರನಿಗೂ ಪೃಥ್ವೀರಾಜನಿಗೂ ವೈಮನಸ್ಸಿರುವದರಿಂದ ಅವನಿಂದ ನೆರವು ದೊರೆತರೆ ದಂಡಯಾತ್ರೆಗೆ ಹೊರಡುವದಕ್ಕೆ ಒಳಿತಾಗುವದೆಂದು ಅವನು ಭಾವಿಸಿದ್ದನು. ಒಮ್ಮೆ ಚವ್ಹಾಣ ಸಮ್ರಾಟನ ಮದವನ್ನಿಳಿಸಬೇಕೆಂದು ಅವನು ನಿರ್ಧರಮಾಡಿ ಸಂಗ್ರಾಮದ ಸಿದ್ಧತೆಯನ್ನು ಒಳ್ಳೆಯ ರಭಸದಿಂದ ನಡೆಸಿದ್ದನು.

ಭಾರತವು ಅಂತಃಕಲಹದ ತವರುಮನೆಯೆಂಬುದನ್ನು ಶಹಾಬುದ್ದೀನನು ಮೊದಲಿನಿಂದಲೂ ಅರಿತವನಾಗಿದ್ದನು. ಅನೇಕ ಜಾತಿ, ಅನೇಕ ಧರ್ಮ, ಅನೇಕ ಪಂಗಡ ಮೊದಲಾದವುಗಳಿಂದ ಕೂಡಿದ ದೇಶದಲ್ಲಿ ಒಡಕು ಹುಟ್ಟಿಸಿ, ಕಾರ್ಯಸಾಧನೆ ಮಾಡಿಕೊಳ್ಳುವದು ಅಸಾಧ್ಯವಲ್ಲವೆಂದು ಅವನು ತಿಳಿದನು. ರಾಜ್ಯದಾಶೆಯಿಂದಲೂ

ಅಧಿಕಾರದ ಲಾಲಸೆಯಿಂದಲೂ ದ್ರವ್ಯದ ಲೋಭದಿಂದಲೂ ಹಿಂದುಗಳು ವಶರಾಗುವ ರೆಂದೂ, ಅವರಿಂದ ತನ್ನ ಕಾರ್ಯಕ್ಕೆ ಅನೇಕ ಬಗೆಯಿಂದ ಸಹಾಯವಾಗದಿರಲಾರ ದೆಂದೂ ಅವನು ಭಾವಿಸಿಕೊಂಡನು.

ಹಿಂದುಸ್ತಾನದ ಪರವ ತೆಯು ಇತಿಹಾಸದಲ್ಲಿ ನೋಡಿದತ್ತೆಲ್ಲ ಸ್ವಾರ್ಥಿಗಳೂ, ಗೃಹಭೇದಿಗಳೂ, ದೇಶವಿಘಾತಕರೂ, ರಾಷ್ಟ್ರಧರ್ಮವಿಹೀನರೂ ಆದವರ ಚಿತ್ರಗಳೇ ಬಹಳವಾಗಿ ಕಾಣುತ್ತಿರುವವು. ಇಂತಹ ದೇಶವಿಘಾತಕರೇ ದೇಶಾಭಿಮಾನಿಗಳ ಸತ್ವವನ್ನು ಮಣ್ಣುಗೂಡಿಸಿ, ಭಾರತದ ಸ್ವಾತಂತ್ರ್ಯಸೂರ್ಯನನ್ನು ಅಸ್ತಗೊಳಿ ಸಿದರು. ಅಂತಹ ಜನರಿಂದಲೇ ಅಭಿನವ ಭಾರತವು ಸದ್ಯದ ಸ್ಥಿತಿಯನ್ನು ಹೊಂದಿ ರುವದು. ದೇಶದ್ರೋಹಿಗಳಿಗೆ ಸ್ವಾತಂತ್ರ್ಯಕ್ಕಿಂತಲೂ ಪಾರತಂತ್ರ್ಯವೇ ಪ್ರಿಯವಾಗಿ ತೋರುತ್ತಿರಬಹುದೇ? ಗಿಝುನೀ ಮಹಮ್ಮೂದನು ಹದಿನೇಳು ಸಾರೆ ದಂಡೆತ್ತಿ ಬಂದು, ಪವಿತ್ರವಾದ ದೇವಸ್ಥಾನಗಳನ್ನು ನೆಲಸಮ ಮಾಡಿ, ಹೇರಳವಾದ ಹಣವನ್ನು ಸಾವಿರಗಟ್ಲೆ ಒಂಟೆಗಳಮೇಲೆ ಒಯ್ಯುತ್ತಿದ್ದರೂ ಇಡಿ ಭಾರತವು ಒಂದಾಗಿ ಅವನನ್ನು ತಡೆಯಬಾರದೇಕೆ? ಒಬ್ಬಿಬ್ಬರು ಸತ್ವಶಾಲಿಗಳು ಸ್ವಾಭಿಮಾನದಿಂದ ಮುಂದಾಗಿ ಮಣ್ಣುಗೂಡಿದ್ದರೂ ಉಳಿದವರು ಕಣ್ಣುಮುಚ್ಚಿ ಸ್ವಸ್ಥವಾಗಿ ಕುಳಿತುಕೊಳ್ಳುವದು ಯಾವ ಗುಣದ ದ್ಯೋತಕವೆಂಬದನ್ನು ವಾಚಕ ಮಹಾಶಯರೇ ನಿರ್ಧರಿಸಲಿ. ಅನೇಕ ಹಿಂದುಗಳಲ್ಲಿ ಇಂತಹ ಪರಾನುಕೂಲ, ಸ್ವಕೀಯ ಪ್ರತಿಕೂಲ ಗುಣಗಳಿರುವದನ್ನು ಶಹಾಬುದ್ದೀನನು ಮನಗಂಡಿದ್ದರಿಂದಲೇ ಪೃಥ್ವೀರಾಜನಂತಹ ಸಂಗ್ರಾಮ ಕೇಸರಿ ಯೊಡನೆ ಯುದ್ಧಮಾಡುವ ಸಿದ್ಧತೆಗೆ ತೊಡಗಿದನು.

ಶಹಾಬುದ್ದೀನನು ಯುದ್ಧದ ಸಿದ್ಧತೆಗೆ ತೊಡಗಿದ್ದುದು ಅವನ ಮಂತ್ರಿಯಾದ ಖುರಾಸನಖಾನನ ಮನಸ್ಸಿಗೆ ಬರಲಿಲ್ಲ. ಅವನು ಅತ್ಯಂತ ರಾಜನಿಷ್ಠನೂ ಸದ ಸದ್ವಿವೇಕ ಬುದ್ಧಿಯವನೂ ಇದ್ದುದರಿಂದ ನಿಸ್ಪೃಹತೆಯಿಂದ ತನ್ನ ಅಭಿಪ್ರಾಯ ತಿಳಿಸಿ, ಸುಲತಾನನ ಮನಸ್ಸನ್ನು ತಿರುಗಿಸಬೇಕೆಂದು ವಿಚಾರಿಸಿಕೊಂಡಿದ್ದನು. ಓಲಗದಲ್ಲಿ ಈ ವಿಷಯ ತೆಗೆಯುವದಕ್ಕಿಂತಲೂ ಅವನು ಒಬ್ಬನೇ ಇದ್ದಾಗ ತೆಗೆ ಯುವದು ಒಳಿತೆಂಬದು ಖಾನನಿಗೆ ತೋಚಿದ್ದರಿಂದ, ಅವನು ಅರಮನೆಗೆ ಹೋದನು. ಆಗ ಶಹಾಬುದ್ದೀನನು ವಿಶ್ರಾಂತಿ ಮಂದಿರದಲ್ಲಿ ಪವಡಿಸಿದ್ದನು. ಅಕಸ್ಮಾತ್ತಾಗಿ ಖುರಾಸನಖಾನನು ಬಂದದ್ದನ್ನು ನೋಡಿ ಅವನು:—

"ವಜೀರ, ಬನ್ನಿರಿ," ಎಂದು ನುಡಿದು, ಅವನನ್ನು ಬಳಿಯಲ್ಲಿ ಕುಳ್ಳಿರಿಸಿ ಕೊಂಡು:—"ಸಹಜವಾಗಿ ಬಂದಿರೋ?—ಏನಾದರೂ ಕೆಲಸವಿದೆಯೋ?"

"ತನ್ನೊಡನೆ ಎರಡು ಆಪ್ತಾಲೋಚನೆಯ ಮಾತುಗಳಾಡುವದಿದ್ದುದರಿಂದಲೇ ಬಂದೆನು." ಎಂದು ಖುರಾಸನಖಾನನು ತಡವರಿಸುತ್ತ ಹೇಳಿದನು.

ಶಹಾಬುದ್ದೀನನು ಒಳ್ಳೆಯ ವರ್ಚಸ್ವಿಯೂ ನಿಷ್ಠುರ ಸ್ವಭಾವದವನೂ ಇದ್ದನು. ಅವನೆದುರಿನಲ್ಲಿ ಅವನ ಮನಸ್ಸಿನ ವಿರುದ್ಧ ಮಾತುಗಳನ್ನಾಡುವದು ಒಳ್ಳೆಯ ಕಠಿಣ ಕೆಲಸವಾಗಿತ್ತು. ಖುರಾಸನಖಾನನು ಅವನ ಸ್ಥಿತಿಗತಿಗಳನ್ನು ಬಲ್ಲವನಾಗಿದ್ದರೂ ತನ್ನ ಸರಳವಾದ ಅಭಿಪ್ರಾಯವನ್ನು ಹೇಗಾದರೂ ಮಾಡಿ ಅವನ ಮುಂದೆ ಇಡುತ್ತಿದ್ದನು. ಆಪ್ತಾಲೋಚನೆಗಾಗಿ ಬಂದಿರುವೆನೆಂದು ಖುರಾಸನಖಾನನು ನುಡಿದ ಕೂಡಲೆ ಶಹಾಬುದ್ದೀನನು ಆತುರದಿಂದ:—

"ವಜೀರ, ಏನದು!"

"ಪೃಥ್ವೀರಾಜನೊಡನೆ ಯುದ್ಧಕ್ಕೆ ಹೊರಡುವದಕ್ಕಾಗಿ ಸೇನಾಸಿದ್ಧತೆ ನಡೆಯಿಸಿರುವಿರಿ. ಖಾವಿಂದ, ನಾವಾಗಿ ಮೊದಲು ಕಾಲು ಕೆದರಿದರೆ ಅನ್ಯಾಯವೆನಿಸುವದು. ಮೊದಲು ವಚನಬದ್ಧರಾಗಿ, ಹಿಂದಿನಿಂದ ಅದನ್ನು ಮುರಿಯುವದೆಂದರೆ ರಾಜಧರ್ಮದ ಛಲನೆ ಮಾಡಿದಂತಾಗುವದು. ಈ ನ್ಯಾಯಾನ್ಯಾಯಗಳ ವಿಚಾರವು ಒತ್ತಟ್ಟಿಗಿರಲಿ. ಪೃಥ್ವೀರಾಜನು ವೀರಾಗ್ರಣಿಯಿರುವನು. ಅವನನ್ನು ಕೆಣಕಿ ಜಯಸಂಪಾದನೆ ಮಾಡಿಕೊಳ್ಳುವದು ದುರತೋಪಾಸ್ತ. ನಾವು ಎಷ್ಟು ಬಗೆಯ ಯುದ್ಧದ ಸಿದ್ಧತೆಮಾಡಿದರೂ, ಎತ್ತಿಹೋದವರಾಗುವೆವಾದ್ದರಿಂದ ಅಲ್ಲಿಯ ಜನರ ನೆರವಿಲ್ಲದೆ ಜಯಸಂಪಾದನೆಯಾಗುವದು ಅಸಾಧ್ಯ. ಭೀಮದೇವ, ಜಯಚಂದ್ರ, ಪೃಥ್ವೀರಾಜ, ಸಮರಸಿಂಹ ಮೊದಲಾದವರಲ್ಲಿ ಈಗ ಒಡಕು ಹುಟ್ಟಿರುವದು. ಜಯಚಂದ್ರನಾಗಲಿ, ಭೀಮದೇವನಾಗಲಿ ನಮ್ಮನ್ನು ನೆರವಿಗೆ ಕರೆಯುವದು ನಿಶ್ಚಯ. ಆಗ ದಂಡೆತ್ತಿ ಹೋಗುವದರಿಂದ ಲಾಭವುಂಟಲ್ಲದೆ, ನಾವೇ ಏಕಾಕಿಗಳಾಗಿ ಪರದೇಶದಲ್ಲಿ ಹೋದರೆ, ಪ್ರಸಂಗವಶಾತ್ ಸರ್ವ ನಾಶವಾಗುವ ಪ್ರಸಂಗವೊದಗದಿರಲಾರದು. ಯುದ್ಧದ ಸಿದ್ಧತೆ ಮಾಡುವದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಹಿಂದು ರಾಜರಿಂದ ಸಹಾಯದ ಬಗ್ಗೆ ಬೇಡಿಕೆ ಬಂದ ಹೊರತು ಸ್ವತಂತ್ರರೀತಿಯಿಂದ ಹಿಂದುಸ್ತಾನದ ಮೇಲೆ ದಂಡೆತ್ತಿ ಹೋಗಬಾರದೆಂದು ನನ್ನ ಬಿನ್ನಹ."

ಖುರಾಸನಖಾನನ ಮನಸ್ಸಿನಲ್ಲಿ ಯುದ್ಧದ ಸಿದ್ಧತೆ ನಿಲ್ಲಿಸುವದಕ್ಕಾಗಿ ಹೇಳುವದಿದ್ದರೂ, ಆ ಮಾತು ಶಹಾಬುದ್ದೀನನ ಮನಸ್ಸಿಗೆ ಬರಲಿಕ್ಕಿಲ್ಲವೆಂದು ತಿಳಿದು, ಸದ್ಯಕ್ಕೆ ದಂಡಯಾತ್ರೆ ನಿಲ್ಲಿಸುವದಕ್ಕಾಗಿ ಆತ ಹೀಗೆ ಮಾತನಾಡಿದನು. ಅವನು ಎಷ್ಟು ನಿಸ್ಪೃಹ ವೃತ್ತಿಯವನಿದ್ದರೂ, ಅನ್ಯಾಯದಿಂದ ಪರದೇಶಗಳ ಮೇಲೆ ದಾಳಿ ಮಾಡುವದು ಯೋಗ್ಯವಲ್ಲವೆಂದು ಆತನಿಂದ ನಿರ್ದಾಕ್ಷಿಣ್ಯವಾಗಿ ಹೇಳಲಾಗಲಿಲ್ಲ.

ಕ್ಷುದ್ರ ಮನೋವೃತ್ತಿಯುವರ ಸೇವೆಯಲ್ಲಿ ತೊಡಗುವ ಸದ್ಗುಣಿಗಳ ಗುಣಪ್ರಭಾವವು ನಷ್ಟವಾಗುವದೆಂದು ಇದರಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

ಎರಡು ಸಾರೆ ಪೆಟ್ಟು ತಿಂದವನಾದ ಶಹಾಬುದ್ದೀನನಿಗೆ ವಜೀರನ ಮಾತು ಶೀರ ಅಯಥಾರ್ಥವಾಗಿ ತೋರಲಿಲ್ಲ.

"ವಜೀರ, ಹಿಂದುರಾಜರಿಂದ ಬೇಡಿಕೆಯು ಬೇಗನೆ ಬಂದರೆ ಒಳಿತಾಯಿತು. ಅವರು ನನ್ನನ್ನು ನೆರವಿಗೆ ಕರೆಯದಿದ್ದರೂ ಹೇಡಿಯಂತೆ ನಾನು ತಟಸ್ಥನಾಗಿ ಕುಳಿತುಕೊಳ್ಳುವದಿಲ್ಲ. ಆ ಮದಾಂಧ ಪೃಥ್ವೀರಾಜನನ್ನು ಪರಾಜಯಪಡಿಸಿದ ಹೊರತು ನನ್ನ ಹೃದಯವು ಶಾಂತವಾಗುವಂತಿಲ್ಲವಾದ್ದರಿಂದ, ನಾನು ಯುದ್ಧದ ಸಿದ್ಧತೆ ನಡೆಸಿರುವೆನು. ಈ ಸಾರೆ ಯುದ್ಧದಲ್ಲಿ ಅವನ ಶಿರಚ್ಛೇದ ಮಾಡದಿದ್ದರೆ ನಾನು ಈ ಸುಲತಾನೀ ಸಿಂಹಾಸನವನ್ನೇರಲಿಕ್ಕಿಲ್ಲ!"

ಶಹಾಬುದ್ದೀನನ ಹೃದಯ ಚಿತ್ರವು ಹೇಗಿದೆ ನೋಡಿರಿ! ಹಿಂದಕ್ಕೆ ಸೆರೆ ಸಿಕ್ಕಾಗ ಪ್ರಾಣದಾನ ಕೊಟ್ಟದ್ದರ ಪ್ರತಿಫಲವನ್ನು ವಿಪರೀತವಾದ ರೀತಿಯಿಂದ ಕೊಡಬೇಕೆಂದು ಯೋಚಿಸಿದ ಆ ಘೋರಿಗೆ ಕೃತಘ್ನನೆಂದು ಯಾರು ಅನ್ನಲಿಕ್ಕಿಲ್ಲ? ದೊಡ್ಡಸ್ತನ-ಮಾನ-ಮರ್ಯಾದೆಗಳಿಂದಲೂ, ಧರ್ಮಬುದ್ಧಿಯಿಂದಲೂ ಬಿಟ್ಟುಕೊಟ್ಟದ್ದಕ್ಕೆ ಪೃಥ್ವೀರಾಜನ ಗಂಟಲಿಗೆ ಗಾಣವಾಗಬೇಕೆಂದು ಶಹಾಬುದ್ದೀನನು ದುರಾಲೋಚಿಸತೊಡಗಿದ್ದನು. ರಜಪೂತ ದೊರೆಗಳಲ್ಲಿ ಧರ್ಮಭಾವನೆಗಳು ಅತ್ಯಂತ ಜಾಗ್ರತವಿರುತ್ತಿದ್ದದರಿಂದಲೆ ಅವರು ಕೃತಘ್ನರಾದ ಪರಕೀಯರ ಮೋಸಕ್ಕೆ ಗುರಿಯಾಗುತ್ತಿದ್ದರು. 'ಶಠಂ ಪ್ರತಿ ಶಾಠ್ಯಮಾಚರೇತ್' ಎಂಬ ನ್ಯಾಯದಂತೆ ನಡೆಯುವದು ರಾಜಕಾರಣ ಕುಶಲತೆಯ ಲಕ್ಷಣವಿರುವದು. ಹಾಗೆ ಜಾಗ್ರತೆಯಿಂದ ಹಿಂದುರಾಜರು ನಡೆಯುತ್ತಿದ್ದರೆ, ಭರತಭೂಮಿಯ ಇತಿಹಾಸಕ್ಕೆ ಬೇರೆ ಸ್ವರೂಪವೇ ಪ್ರಾಪ್ತವಾಗುತ್ತಿತ್ತೆಂದು ನಿರಾತಂಕವಾಗಿ ಹೇಳಬಹುದಾಗಿತ್ತು.

———

ಮಧ್ಯರಾತ್ರಿಯ ಸಮಯ. ಕನೋಜ ರಾಜಧಾನಿಯಲ್ಲಿ ಎಲ್ಲ ಕಡೆಗೂ ಶಾಂತತಾ ಸಾಮ್ರಾಜ್ಯವು ವ್ಯಾಪಿಸಿತ್ತು. ಭೀಷಣವಾದ ತಮವು ಜಗತ್ತಿನ ತುಂಬ ಹಬ್ಬಿಕೊಂಡಿತ್ತು. ನಕ್ಷತ್ರಪ್ರಕಾಶಕ್ಕೆ ಸಹ ಇಂಬುಗೊಡದಂತೆ ಆಗಸದಲ್ಲಿ ಮೋಡವು ಮುಸುಕಿದ್ದರಿಂದ ಅಂದಿನ ರಾತ್ರಿಗೆ ಮತ್ತಿಷ್ಟು ಭಯಾನಕತೆಯುಂಟಾಗಿತ್ತು. ಇಂತಹ ಸಮಯದಲ್ಲಿ ಕೆಲವು ಜನರು ಸಂಯುಕ್ತೆಯ ಕಾರಾಗೃಹದ ಕಡೆಗೆ ನಡೆದಿದ್ದರು. ಕಾರ್ಯಾತುರತೆಯಿಂದ ಅವರು ಒಳ್ಳೆಯ ವೇಗದಿಂದ ಸಾಗಿದ್ದರು. ಅಷ್ಟರಲ್ಲಿ ಒಂದು

ಸಂಯುಕ್ತಾಪಹರಣ.

ವ್ಯಕ್ತಿಯು:—"ಇದೇ ಸಂಯುಕ್ತಾದೇವಿಯವರನ್ನಿರಿಸಿದ ಸೆರೆಮನೆ" ಎಂದು ನುಡಿದ ಕೂಡಲೆ ಆ ಜನರೆಲ್ಲರೂ ಅಲ್ಲಿಗೆ ಹೋದರು. ಆಗ ಕಾವಲುಗಾರರು ನಿದ್ರಾವಶರಾಗಿದ್ದರು. ಆ ಜನರು ಕಾವಲುಗಾರರ ಬಾಯಿಗೆ ಚೆಂಡು ಹಾಕಿ, ಪಿಚ್ಚಂಡಿ ಬಿಗಿದು ಚಲ್ಲಿದರು; ಆ ಮೇಲೆ ಕಾರಾಗೃಹದ ಬೀಗ ಮುರಿದು ಆ ಜನರಲ್ಲಿಯ ಇಬ್ಬರೇ ಒಳಗೆ ಹೋದರು.

ಸಂಯುಕ್ತೆಯು ಇನ್ನೂ ನಿದ್ರೆ ಹೋಗಿರಲಿಲ್ಲ; ಅವಳು ಚಿಂತಾಯುಕ್ತಳಾಗಿ ಕುಳಿತುಬಿಟ್ಟಿದ್ದಳು. ಒಳಗೆ ಹೋದ ಇಬ್ಬರು ತಮ್ಮ ಕೈಯೊಳಗಿನ ಪಂಜು ಹೊತ್ತಿಸಿದ ಕೂಡಲೆ ಸಂಯುಕ್ತೆಯು ಭಯಭೀತಳಾಗಿ "ಯಾರವರು!" ಎಂದು ಕೇಳಿದಳು.

"ನಾವು ನಿನ್ನ ಅಂತಕರು!" ಎಂದು ಒಬ್ಬನು ನುಡಿದ ಕೂಡಲೆ ಸಂಯುಕ್ತೆಯು ತ್ವೇಷಗೊಂಡು—"ನೀವು ಅಂತಕರೊ?"

"ಹೌದು! ನಿಮ್ಮನ್ನು ಕೊಲೆ ಮಾಡುವದಕ್ಕಾಗಿ ಜಯಚಂದ್ರ ಮಹಾರಾಜರು ನಮ್ಮನ್ನು ಕಳುಹಿಸಿದರು" ಎಂದು ಮತ್ತೊಬ್ಬನು ನುಡಿದನು.

"ಜಯಚಂದ್ರ ಮಹಾರಾಜರು ನಿಮ್ಮನ್ನು ಕಳಿಸಿರುವರೆ? ನನ್ನನ್ನು ಕೊಲ್ಲುವದಕ್ಕಾಗಿ ನನ್ನ ತಂದೆಯವರು ನಿಮ್ಮನ್ನು ಕಳಿಸಿದರೆ?"

"ಹೌದು" ಎಂದು ನುಡಿದು, ಎರಡನೆಯವನು—"ಸಂಯುಕ್ತಾದೇವಿಯವರೆ, ನೀವಾಗಿ ನಿಮ್ಮ ಮೃತ್ಯುವನ್ನು ಬರಮಾಡಿಕೊಂಡಿರಿ." "ಅದೇಕೆ?"

"ನೀನು ನಮ್ಮ ಮಹಾರಾಜರ ಹಗೆಯಾದ ಪೃಥ್ವೀರಾಜನನ್ನು ವರಿಸಲು ನಿಶ್ಚಯ ಮಾಡಿದ್ದರಿಂದಲೇ ಅವರು ನಿನ್ನನ್ನು ಕೊಲ್ಲಲುದ್ಯುಕ್ತರಾದರು. ಈಗಲಾದರೂ ಏನಾಗಿದೆ? ವ್ಯರ್ಥವಾಗಿ ಸಾಯುವದಕ್ಕಿಂತ ಮತ್ತೊಬ್ಬ ರಾಜಪುತ್ರನನ್ನು ವರಿಸುವೆನೆಂದು ಹೇಳಬಾರದೆ? ನೀನು ಈ ಮಾತಿಗೆ ಒಪ್ಪಿದರೆ ನಿನ್ನನ್ನು ಕೊಲ್ಲಬಾರದೆಂದು ಮಹಾರಾಜರು ತಿಳಿಸಿರುವರು" ಎಂದು ಮೊದಲನೆಯವನು ಮಾತನಾಡಲು, ಸಂಯುಕ್ತೆಯು ಸ್ಪಷ್ಟವಾದ ಮಾತಿನಿಂದ—

"ಕೊಲೆಗಡಕರೆ, ನೀವು ನನ್ನನ್ನು ಅಗತ್ಯವಾಗಿ ಕೊಲ್ಲಿರಿ. ಅಸ್ಥಿರವಾದ ಈ ಜೀವಿತಕ್ಕಾಗಿ ನಾನು ಶೀಲಭ್ರಷ್ಟಳಾಗಲಾರೆನು. ನಾನೀಗ ಯಾವ ಮಹಾತ್ಮನನ್ನು ನನ್ನ ಹೃದಯಮಂದಿರದಲ್ಲಿ ಸ್ಥಾಪಿಸಿರುವೆನೋ, ನಿತ್ಯವೂ ಯಾವನ ಸ್ಮರಣೆಯಿಂದ ಸ್ವರ್ಗೀಯ ಆನಂದವನ್ನು ಹೊಂದುತ್ತಲಿರುವನೋ, ಆ ನನ್ನ ಹೃದಯಸಮ್ರಾಟನನ್ನು ಪದಚ್ಯುತ ಮಾಡಲಿಕ್ಕೆ ನನಗೆ ಸಾಧ್ಯವಿರುವದಿಲ್ಲ. ಕೊಲ್ಲಿರಿ; ನನ್ನನ್ನು ಬೇಗನೆ ಕೊಲ್ಲಿರಿ! ನನ್ನ ಶಿರವನ್ನು ಪರಮಪೂಜ್ಯರಾದ ಪಿತೃಗಳಿಗೆ ತೋರಿಸಿ, ಅವರ ನೇತ್ರಗಳನ್ನು ಸಾಫಲ್ಯಗೊಳಿಸಿರಿ!"

"ದೇವೀ, ವಿಚಾರ ಮಾಡಿ ನೋಡಿರಿ. ಅಲ್ಪ ಕಾತಣಕ್ಕಾಗಿ ಅಮೂಲ್ಯವಾದ ಪ್ರಾಣವನ್ನು ತ್ಯಜಿಸಬೇಡಿರಿ. ಪ್ರತಿಮೆಗೆ ಮಾಲೆ ಹಾಕಿದ್ದರಿಂದ ಪೃಥ್ವೀರಾಜನನ್ನು ವರಿಸಿದಂತಾಗಲಿಲ್ಲ. ಅವನಿಗಿಂತಲೂ ಶ್ರೇಷ್ಠನೂ, ಸುಂದರನೂ, ಬಲಿಷ್ಠನೂ ಆದ ರಾಜಪುತ್ರನಿಗೆ ನಿಮ್ಮನ್ನು ಕೊಡುವದಕ್ಕೆ ಮಹಾರಾಜರವರು ಸಿದ್ಧರಿರುವರು. ನೀವು ಅವರ ವೈರಿಯನ್ನು ವರಿಸುವೆನೆಂಬ ಹಟಹಿಡಿದು ಜೀವಕ್ಕೆ ಎರವಾಗಬೇಡಿರಿ."

"ಚಾಂಡಾಲರೇ, ನನ್ನ ತಂದೆಯವರ ದೃಷ್ಟಿಗೆ ಪೃಥ್ವೀರಾಜನಿಗಿಂತ ಬಲಾಢ್ಯರೂ, ಶ್ರೇಷ್ಠರೂ, ಸುಂದರರೂ ಈ ಜಗತ್ತಿನಲ್ಲಿ ಯಾರಾದರೂ ಕಾಣುತ್ತಿರಬಹುದು; ಆದರೆ ನನ್ನ ದೃಷ್ಟಿಗೆ ಇಡಿ ಜಗತ್ತಿನಲ್ಲಿ ಅವರೇ ಅದ್ವಿತೀಯರಾಗಿ ತೋರುವರು. ನನ್ನ ಹೃದಯದೇವತೆಗಳು ಹೇಗಿದ್ದರೂ ಅವರು ನನ್ನ ಹೃದಯಕ್ಕೆ ದೇವತೆಗಳೇ!"

"ನಿನ್ನ ಬುದ್ಧಿ ಭ್ರಮಣವಾಗಿದೆ. ಸಿದ್ಧಳಾಗು, ಮರಣಕ್ಕೆ ಸಿದ್ಧಳಾಗು! ಪಿತೃದ್ರೋಹಿಯಾದ ನಿನ್ನನ್ನು ಅರೆಕ್ಷಣವಾದರೂ ಜೀವದಿಂದಿರಿಸಲಾರೆನು" ಎಂದು ಮೊದಲನೆಯವನು ನುಡಿದು ತನ್ನ ಕತ್ತಿಯನ್ನು ಅವಳ ಮೇಲೆ ನೆಗಹಿದನು.

ಆಗ ಸಂಯುಕ್ತೆಯು ಅವನೆದುರಿನಲ್ಲಿ ಶಿರವನ್ನು ಬಗ್ಗಿಸಿ—"ಪೂರೈಸು! ನಿನ್ನ ಕಾರ್ಯವನ್ನು ಬೇಗನೆ ಪೂರೈಸು!" ಎಂದು ನುಡಿದು:—"ಪೃಥ್ವೀರಾಜ! ಪ್ರಿಯಕರಾ! ನಿಮ್ಮದರುಶನವು ಒಮ್ಮೆಯಾದರೂ ಆಗಲಿಲ್ಲ! ಪೃಥ್ವೀರಾಜ! ಪೃಥ್ವೀರಾಜ!...."

"ದೇವಿ! ನಿನ್ನ ಹೃದಯ ಪರೀಕ್ಷೆಯು ಚನ್ನಾಗಿ ಆಯಿತು. ನಾನೇ ನಿನ್ನ ಪ್ರಿಯಕರನಾದ ಪೃಥ್ವೀರಾಜ ಚಹ್ವಾಣನು!"

ಈ ಮಾತುಗಳನ್ನು ಕೇಳಿದ ಕೂಡಲೆ ಸಂಯುಕ್ತೆಯು ಮೆಟ್ಟಿಬಿದ್ದಳು. ತನ್ನ ಆಯುಷ್ಯದ ಅಂತಿಮ ಕ್ಷಣವೆಂದು ತಿಳಿದಿದ್ದ ಅವಳಿಗೆ ಈ ಮಾತುಗಳನ್ನು ಕೇಳಿ ಹೇಗಾಗಿರಬಹುದು? ಅಷ್ಟರಲ್ಲಿ ಚಿತ್ರರೇಖೆಯು ಅಲ್ಲಿಗೆ ಬಂದು:—

"ಸಂಯುಕ್ತಾದೇವಿಯವರೇ, ಇವರೇ ನಿಮ್ಮ ನಾಥರಾದ ಪೃಥ್ವೀರಾಜರು! ನಿಮ್ಮ ಮುಕ್ತತೆಗಾಗಿ ಧಾವಿಸಿ ಬಂದಿರುವರು."

ಸಂಯುಕ್ತೆಯು ಹರ್ಷೋನ್ಮಾನದಿಂದ ಕ್ಷಣಹೊತ್ತು ಎಚ್ಚರದಪ್ಪಿದಳು. ಅವಳು ತನ್ನ ಪ್ರಿಯಕರನ ಪಾದಗಳ ಮೇಲೆ ಮಸ್ತಕವಿರಿಸಿ—"ನಾಥರೆ! ಧನ್ಯಳಾದೆನು! ಧನ್ಯಳಾದೆನು!"

ಚಿತ್ರರೇಖೆಯು ಸತಿಯ ಸಂದೇಶವನ್ನು ತಿಳಿಸುವದಕ್ಕಾಗಿ ದಿಲ್ಲಿಗೆ ಹೋದದ್ದೂ, ಅವಳು ಸಂಯುಕ್ತೆಯ ವಿಷಯದ ಎಲ್ಲ ಸಂಗತಿಯನ್ನು ಪೃಥ್ವೀರಾಜನಿಗೆ ತಿಳಿಸಿದ್ದೂ ವಾಚಕ ಮಹಾಶಯರ ಸ್ಮರಣೆಯಲ್ಲಿರಬಹುದು. ತನ್ನ ವಿಷಯಕ್ಕೆ ದೃಢವಿಶ್ವಾಸ

ವುಳ್ಳವಳಾಗಿ ಕಾರಾಗೃಹದಲ್ಲಿ ಕೊಳೆಯ ತೊಡಗಿದ್ದ ತನ್ನ ಪ್ರಿಯತಮೆಯ ಬಂಧ ವಿಮೋಚನೆ ಮಾಡಬೇಕೆಂದು ಪೃಥ್ವೀರಾಜನು ಸಸೈನ್ಯವಾಗಿ ಕನೋಜಕ್ಕೆ ಬಂದನು. ಅವನು ತನ್ನ ಎಲ್ಲ ಸೈನ್ಯವನ್ನು ರಾಜಧಾನಿಯ ಬಳಿಯ ಅರಣ್ಯದಲ್ಲಿ ಗುಪ್ತವಾಗಿರಿಸಿ, ಕೆಲವು ಜನರೊಡನೆ ಮಧ್ಯರಾತ್ರಿಯಲ್ಲಿ ರಾಜಧಾನಿಯನ್ನು ಸೇರಿದನು.

ಸಂಯುಕ್ತೆಯೊಡನೆ ಸಂಭಾಷಣ ನಡೆಯಿಸಿದ ಈರ್ವರಲ್ಲಿ ಮೊದಲನೆಯವನೇ ಪೃಥ್ವೀರಾಜನು; ಎರಡನೆಯವನು ಬಟಂಡಾಗಡದ ಸರದಾರನಾದ ಅಮರಸಿಂಹನು-ಚಿತ್ರರೇಖೆಯ ಪತಿಯು.

ಸಂಯುಕ್ತೆಯು ಆನಂದದಿಂದ ಪೃಥ್ವೀರಾಜನ ಪಾದಕ್ಕೆರಗಿದ ಕೂಡಲೆ ಅವನು ತನ್ನ ಪ್ರಿಯತಮೆಯನ್ನು ಹಿಡಿದೆತ್ತಿ ಆಲಿಂಗಿಸಿ:—"ಪ್ರಿಯೆ! ನಿನ್ನ ದೃಢ ನಿಶ್ಚಯವನ್ನೂ, ನನ್ನ ಮೇಲಿನ ಅಚಲ ಪ್ರೇಮವನ್ನೂ ನೋಡಿ ನಾನು ಧನ್ಯನಾದೆನು."

"ಅಂತೂ ನನ್ನ ಪರೀಕ್ಷೆಯನ್ನು ಈ ರೀತಿಯಾಗಿ ಮಾಡಿ ಸ್ವೀಕರಿಸಬೇಕೆಂದು ನಿಶ್ಚಯಿಸಿಕೊಂಡಿದ್ದಿರಾ?" ಎಂದು ನುಡಿದು, ಸಂಯುಕ್ತೆಯು ಚಿತ್ರರೇಖೆಯನ್ನು ಕುರಿತು—"ನೀನು ನನ್ನ ಸ್ವಭಾವ ಪರಿಚಯವನ್ನು ಇವರಿಗೆ ಚನ್ನಾಗಿ ಮಾಡಿ ಕೊಟ್ಟಿಲ್ಲವೆಂಬಂತೆ ತೋರುತ್ತದೆ."

"ದೇವೀ, ಬಾಯಿಯಿಂದ ಹೇಳಿದ್ದಕ್ಕೂ ಪ್ರತ್ಯಕ್ಷವಾಗಿ ಕಂಡದ್ದಕ್ಕೂ ಅಭ್ಯಂತರವಿಲ್ಲವೇ? ಒಡೆಯರು ಒರಿಗೆ ಹಚ್ಚಿಯೇ ಒಡವೆಯನ್ನು ಸ್ವೀಕರಿಸಿದ್ದಕ್ಕೆ ವಿಕಲ್ಪ ಭಾವನೆ ತಳೆಯುವದೇಕೆ?"

"ಹೂಂ! ನಡೆಯಿರಿ; ಇಲ್ಲಿ ವೇಳೆಗಳೆಯುತ್ತ ನಿಲ್ಲುವಂತಿಲ್ಲ. ನಾವು ಆದಷ್ಟು ಬೇಗನೆ ಪಾಳ್ಯವನ್ನು ಕೂಡುವದು ಹಿತಕರವು" ಎಂದು ಅಮರಸಿಂಹನು ನುಡಿಯಲು ಕೂಡಲೆ ಎಲ್ಲರೂ ಅಲ್ಲಿಂದ ಹೊರಟರು.

"ಪೃಥ್ವೀರಾಜನು ಸಂಯುಕ್ತೆಯನ್ನೂ ತನ್ನ ಸಂಗಡಿಗರನ್ನೂ ಕರೆದುಕೊಂಡು ಗುಪ್ತಮಾರ್ಗವಾಗಿ ರಾಜಧಾನಿಯಿಂದ ಹೊರಬಿದ್ದನು. ಅವನು ಎಷ್ಟು ಗುಪ್ತರೀತಿಯಿಂದ ಈ ಕಾರ್ಯ ನೆರವೇರಿಸಿಕೊಂಡಿದ್ದರೂ ಕಾರಸ್ಥಾನವು ಹೊರಬಿದ್ದಿತು. ಕಾವಲುಗಾರರ ಮೇಲ್ವಿಚಾರಣೆ ಮಾಡುವ ಕೋತವಾಲನು ಅಲ್ಲಿಗೆ ಬಂದು ಕಾವಲುಗಾರರ ಸ್ಥಿತಿಯನ್ನು ನೋಡಿ ಈ ಸಂಗತಿಯನ್ನು ಸೇನಾಪತಿಗೆ ತಿಳಿಸಿದನು ಸ್ವಲ್ಪ ಹೊತ್ತಿನಲ್ಲಿ ಜಯಚಂದ್ರನ ಕಿವಿಯವರೆಗೂ ಈ ಸಂಗತಿಯು ಹೋಯಿತು. ಸಂಯುಕ್ತೆಯು ಒಮ್ಮೆಲೆ ಇಲ್ಲದಂತಾದ್ದನ್ನು ಕೇಳಿ ಅವನೇ ನಾಲ್ಕೂ ಕಡೆಗೆ ಕುದುರೆಯಾಳುಗಳನ್ನು ಕಳುಹಿದನು. ರಾಜಧಾನಿಯ ಬಳಿಯ ಅರಣ್ಯದಲ್ಲಿ ಸೈನಿಕರಿದ್ದು ಅವರೇ ಈ ಕೆಲಸ ಮಾಡಿರಬಹುದೆಂದು ಸವಾರರು ಸುದ್ದೀ ತಂದರು. ಕೂಡಲೆ ಜಯ

ಚಂದ್ರನು ಕೋಪಾವಿಷ್ಟನಾಗಿ ಆ ಸೈನ್ಯದ ಮೇಲೆ ದಂಡೆತ್ತಿ ಹೋಗುವದನ್ನು ನಿರ್ಧರಿಸಿ, ಕಹರಕಂಠೀರವನಿಗೆ ಸೈನ್ಯ ಸಿದ್ಧಪಡಿಸುವದಕ್ಕೆ ತಿಳಿಸಿದನು.

ಪ್ರಾತಃಕಾಲದ ಸಮಯ. ಸೂರ್ಯನಾರಾಯಣನು ಇನ್ನೂ ಉದಯಿಸಿದ್ದಿಲ್ಲ. ಅರುಣಪ್ರಕಾಶದಿಂದ ಪೂರ್ವಾಂಗನೆಯ ಮುಖವು ಕೆಂಪಡರಿತ್ತು. ಜಯಚಂದ್ರನೂ ಕಹರಕಂಠೀರವ ಸೇನಾಪತಿಯೂ ಸೈನ್ಯವನ್ನು ತೆಗೆದುಕೊಂಡು ರಾಜಧಾನಿಯಿಂದ ಹೊರಬಿದ್ದರು.

ಸಾಗಿ ಬಂದ ಸೈನ್ಯವು ಪೃಥ್ವೀರಾಜನದೆಂಬದು ತಿಳಿದೊಡನೆಯೆ ಜಯಚಂದ್ರನು ದೇಹಭಾವನವಿಲ್ಲದವನಾದನು. ವೈರಿಯು ತನ್ನ ಕಾರ್ಯ ಸಾಧಿಸಿಕೊಂಡನೆಂದು ಅವನು ಸಿಟ್ಟಿನಿಂದ ಹುಚ್ಚನಾದನು. ಮಗಳ ಮೇಲಂತೂ ಬೆಂಕಿ ಕಾರತೊಡಗಿದನು. ಪಾಳ್ಯದಲ್ಲಿ ಕೈಗೆ ಸಿಕ್ಕರೆ ಅವಳನ್ನು ಕೊಲ್ಲಬೇಕೆಂದು ಅವನು ನಿಶ್ಚಯಮಾಡಿಕೊಂಡಿದ್ದನು. ಎರಡೂ ಬಣಗಳು ಕೈಗೆ ಕೈಕೊಟ್ಟು ಕಾದತೊಡಗಿದವು. ಕಹರಕಂಠೀರವನೂ ಜಯಚಂದ್ರನೂ ತಮ್ಮ ಸೈನಿಕರಿಗೆ ಉತ್ತೇಜನ ಕೊಡುತ್ತ ಕಾದತೊಡಗಿದ್ದರು. ಪೃಥ್ವೀರಾಜನೂ, ಅಮರಸಿಂಹನೂ ತಮ್ಮ ಸೈನಿಕರನ್ನು ಹುರಿದುಂಬಿಸತೊಡಗಿದ್ದರು. ಯುದ್ಧವು ಒಳ್ಳೇ ಭರಕ್ಕೆ ಬಂತು. ಎರಡೂ ಸೈನ್ಯಗಳು ಮೈಮರೆದು ಕಾದತೊಡಗಿದ್ದವು. "ಶಾಬಾಸ್! ಕ್ಷತ್ರಿಯ ವೀರಾಗ್ರಣಿಗಳೆ! ಶಾಬಾಸ್! ನಿಮ್ಮ ನಿಮ್ಮೊಳಗೆ ಬಡಿದಾಡಿ ಕ್ಷೀಣರಾಗುವದಕ್ಕಿಂತ, ಉಭಯ ಪಕ್ಷದವರೂ ನಿಮ್ಮ ಶಕ್ತಿಯನ್ನು ಪರಕೀಯ ಶತ್ರುಗಳ ಮೇಲೆ ಉಪಯೋಗಿಸುತ್ತ ಹೋಗಿದ್ದರೆ, ಭಾವೀಸಂತತಿಯು ದಾಸ್ಯಪಂಕದಲ್ಲಿ ತೊಡಗುತ್ತಿದ್ದಿಲ್ಲ. ನನ್ನಂತೆ ನಿಮ್ಮ ತೇಜವೂ ಭೂತಳದಲ್ಲಿ ಜನರ ಕಣ್ಣು ಕುಕ್ಕಿಸುತ್ತಿತ್ತೆ"ಂದು ಹೊಗಳುವದಕ್ಕಾಗಿ ಪ್ರಭಾಕರನು ಉದಯಾಚಲದ ಕೋಡಗಲ್ಲನ್ನೇರಿದನು.

ಎರಡೂ ಪಕ್ಷದ ಸೈನಿಕರು ಶೌರ್ಯದಿಂದ ಕಾದುತ್ತಿದ್ದರು. ವಿಜಯಶ್ರೀಯು ಯಾರಿಗೆ ಮಾಲೆ ಹಾಕುವಳೆಂಬದು ಇನ್ನೂ ತಿಳಿಯುವಂತಿದ್ದಿಲ್ಲ. ಅಷ್ಟರಲ್ಲಿ ಕಹರಕಂಠೀರವನು ಪೃಥ್ವೀರಾಜನ ಹಿಂದೆ ಬಂದು ಅವನ ಮೇಲೆ ಖಡ್ಗವನ್ನೆತ್ತಿದನು. ಅರೆಕ್ಷಣ ತಡೆದಿದ್ದರೆ, ಅವನ ಇಹಲೋಕ ಯಾತ್ರೆಯು ಮುಗಿದೇ ಹೋಗುತ್ತಿತ್ತು. ಆಗ ಕಹರಕಂಠೀರವನ ಖಡ್ಗವನ್ನು ಯಾವನೋ ಒಬ್ಬ ಸೈನಿಕನು ತನ್ನ ಕೈಯೊಳಗಿನ ಖಡ್ಗದಿಂದ ಹೊಡೆದನು! ಕೂಡಲೆ ಅದು ಕೈಯಿಂದ ತಪ್ಪಿ ದೂರ ಹೋಗಿ ಬೀಳಲು ಅವನು ಶಸ್ತ್ರವಿಹೀನನಾದನು. ಈ ಸಂಧಿಯನ್ನು ಸಾಧಿಸಿ ಆ ನವ ಸೈನಿಕನು ಅವನ ಮೇಲೆ ಭಾಲೆಯನ್ನೆಸೆದನು! ಕೂಡಲೆ ಕಹರಕಂಠೀರವ ಸೇನಾಪತಿಯು ಗತಾಸುವಾಗಿ ಭೂಮಿಗೆರಗಿದನು!

ಸೇನಾಪತಿಯು ಭೂಮಿಗೆ ಬಿದ್ದ ಕೂಡಲೆ ಸೈನಿಕರೆಲ್ಲರೂ ದಿಕ್ಕುಪಾಲಾಗಿ ಓಡತೊಡಗಿದ್ದರು. ಜಯಚಂದ್ರನಿಂದ ಅವರನ್ನು ತಡೆಯಲಾಗಲಿಲ್ಲ. ಪೃಥ್ವೀರಾಜನ ಸೈನಿಕರು ಅವರನ್ನು ಬೆನ್ನಟ್ಟಿ ನುಗ್ಗು ಮಾಡಬೇಕೆಂದು ಯತ್ನಿಸಿದರು; ಆದರೆ ಅದಕ್ಕೆ ಅವನು ಅಡ್ಡಿಮಾಡಿದ್ದರಿಂದ ಅಷ್ಟಕ್ಕೇ ಸುಮ್ಮನಾದರು.

ಪೃಥ್ವೀರಾಜನ ಮೇಲೆ ಬಂದ ವಿಪತ್ತನ್ನು ಪರಿಹರಿಸಿ, ಕಹರಕಂಠೀರವಸೇನಾಪತಿಯನ್ನು ಸಂಹರಿಸಿದವರು ಯಾರೆಂಬದನ್ನು ತಿಳಿದುಕೊಳ್ಳುವದಕ್ಕೆ ವಾಚಕ ಮಹಾಶಯರು ಆತುರಪಡುತ್ತಿರಬಹುದಲ್ಲವೆ? ಸಮರಾಂಗಣದಲ್ಲಿ ಸಂಯುಕ್ತೆಯು ಪುರುಷ ವೇಷಧರಿಸಿ ಪತಿಯ ವೈಗಾವಲಿಗಾಗಿ ನಿಂತಿದ್ದಳು. ಅವಳೇ ಕಹರ ಕಂಠೀರವನನ್ನು ಸಂಹರಿಸಿದವಳು! ಪ್ರಿಯತಮೆಯ ಈ ಸಾಹಸ ನೋಡಿ ಪೃಥ್ವೀರಾಜನಿಗೆ ಮಹದಾನಂದವಾಯಿತು.

ಸಂಯುಕ್ತಾಪಹರಣದಿಂದ ಕೃತಕೃತ್ಯನಾದ ಪೃಥ್ವೀರಾಜನು ವಿಜಯಾನಂದದಿಂದ ದಿಲ್ಲಿಯ ಹಾದಿ ಹಿಡಿದನು. ಈ ಸಂಯುಕ್ತಾಪಹರಣವೇ ಭಾವೀ ಸ್ವಾತಂತ್ರ್ಯಹರಣಕ್ಕೂ, ಆರ್ಯ ಸಾಮ್ರಾಜ್ಯಸೂರ್ಯಾಸ್ತಕ್ಕೂ ಕಾರಣೀಭೂತವಾಗುವದೆಂಬದು ಆಗ ಯಾರಿಗೆ ತಿಳಿಯಬೇಕು?

---

ಪೃಥ್ವೀರಾಜನು ಸಂಯುಕ್ತೆಯನ್ನು ಗುಪ್ತವಾಗಿ ಒಯ್ದದ್ದರಿಂದಲೂ, ಸಮರಾಂಗಣದಲ್ಲಿ ತನ್ನನ್ನು ಪರಾಭವಗೊಳಿಸಿದ್ದರಿಂದಲೂ ಜಯಚಂದ್ರನು ಅವನ ಮೇಲೆ ಅತ್ಯಂತ ಸಂತಪ್ತನಾದನು. ಪೃಥ್ವೀರಾಜನ ಕೃತಿಯು ಅವನ ಹೃದಯದೊಳಗಿನ ಮತ್ಸ ಒಳಜಗಳದ ಉರಿ. ರಾಗ್ನಿಯನ್ನು ಪ್ರಜ್ವಲಗೊಳಿಸಿತು; ಗೃಹಕಲಹದ ಜ್ವಾ ಲೆಯನ್ನು ಜಾಜ್ವಲ್ಯಮಾಡಿತು. ಅವನ ಬಿಸಿನೆತ್ತರದಿಂದಲೇ ಜಯಚಂದ್ರನ ಹೃದಯದ ಜ್ವಾಲೆಯು ನೊಂದಬೇಕೆಂದಿತು ತನ್ನೊಬ್ಬನಿಗೆ ಪೃಥ್ವೀರಾಜನು ಅಜಿಂಕ್ಯನೆ ಬದು ಅವನಿಗೆ ಮನವರಿಕೆಯಾದ್ದರಿಂದ ತನ್ನ ಪಕ್ಷದ ರಾಜರನ್ನೂ, ಪೃಥ್ವೀರಾಜನಿಗೆ ವಿರುದ್ಧವಾಗಿದ್ದ ರಾಜರನ್ನೂ ಸಾಮೋಪಾಯದಿಂದ ಸಂಗ್ರಾಮಕ್ಕೆ ಸಿದ್ಧಮಾಡಿಕೊಂಡನು. ಈ ಸಾರೆಯ ಯುದ್ಧದಲ್ಲಿ ಅವನನ್ನು ಇಹಲೋಕದಿಂದ ಹೊರದೂಡಿ, ಅವನ ರಾಜ್ಯವನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂದು ಜಯಚಂದ್ರನು ಮಹತ್ವಾಕಾಂಕ್ಷೆಯುಳ್ಳವನಾಗಿದ್ದನು. ಗುಜರಾಥದ ಅರಸನಾದ ಭೋಲಾರಾಮಭೀಮದೇವನೆಂಬ ಚಾಲುಕ್ಯವಂಶೀಯ ವೀರಾಗ್ರಣಿಯನ್ನು ತನ್ನ ಸಹಾಯಕ್ಕೆ ಕರೆದುಕೊಳ್ಳಬೇಕೆಂದು ಅವನು ಪ್ರಯತ್ನ ನಡೆಯಿಸಿದ್ದನು. ಅದಕ್ಕಾಗಿ ಅವನ ರಾಜಧಾನಿಯಾದ ಅನಹಿಲಪುರಕ್ಕೆ

ತನ್ನ ಪ್ರತಿನಿಧಿಯನ್ನು ಕಳಿಸಿದ್ದನು. ಭೀಮದೇವನು ಬಹುತರವಾಗಿ ತನ್ನ ಪಕ್ಷವನ್ನು ವಹಿಸುವನೆಂದು ಜಯಚಂದ್ರನು ತಿಳಿದುಕೊಂಡಿದ್ದನು. ಬಹ್ವಂಶದಿಂದ ಅವನ ಆ ತರ್ಕವು ನಿಜವಾಗಿತ್ತು. ಪೃಥ್ವೀರಾಜನಿಗೂ ಅವನಿಗೂ ವೈಮನಸ್ಸಿದ್ದುದರಿಂದ ಅದರ ಲಾಭವು ತನಗಾಗುವದೆಂದು ಅವನು ಭಾವಿಸಿದ್ದುದು ಯಥಾಯೋಗ್ಯವೇ ಸರಿ. ಅವನಿಗೂ ಪೃಥ್ವೀರಾಜನಿಗೂ ಯಾವ ಕಾರಣವಾಗಿ ವಿಮನಸ್ಕತೆಯುಂಟಾಗಿತ್ತೆಂಬದನ್ನು ತಿಳಿಸಿ ಮುಂದೆ ಸಾಗುವದು ನೆಟ್ಟಗೆ.

ಅಬೂಗಡದ ಸರದಾರನಾದ ಸಲಪರಾಮ ಪರಮಾರನಿಗೆ ಮಂಡೋದರಿ ಹಾಗು ಇಚ್ಛಿನೀಕುಮಾರಿ ಎಂಬ ಇಬ್ಬರು ಕನ್ಯೆಯರಿದ್ದರು. ಅವನು ಮಂಡೋದರಿಯನ್ನು ಭೋಲಾ ಭೀಮದೇವನಿಗೆ ಕೊಟ್ಟಿದ್ದನು; ಚಿಕ್ಕವಳಾದ ಇಚ್ಛಿನೀಕುಮಾರಿಯನ್ನು ಪೃಥ್ವೀರಾಜನಿಗೆ ಕೊಡಬೇಕೆಂದು ಅವನು ನಿಶ್ಚಯಿಸಿಕೊಂಡನು. ಇಚ್ಛಿನೀಕುಮಾರಿಯು ರೂಪವತಿಯೂ, ಗುಣವತಿಯೂ ಇರುವಳೆಂಬದನ್ನು ಭೀಮದೇವನು ಕೇಳಿ, ತಾನು ಅವಳನ್ನೂ ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯುಳ್ಳವನಾದನು. ಅವನು ತನ್ನ ಮಂತ್ರಿಯಾದ ಅಮರಸಿಂಹನನ್ನು ಈ ವಿಷಯವಾಗಿ ಮಾತನಾಡುವದಕ್ಕೆಂದು ಅಬೂಗಡಕ್ಕೆ ಕಳುಹಿಸಿದನು. ತನಗೆ ಇಚ್ಛಿನೀಕುಮಾರಿಯನ್ನು ಕೊಡಲಿಕ್ಕೇಬೇಕೆಂದೂ, ಕೊಡಲೊಪ್ಪದಿದ್ದರೆ ಸಂಗ್ರಾಮಕ್ಕೆ ಸಜ್ಜಾಗಬೇಕೆಂದೂ ಅವನು ಮಂತ್ರಿಯೊಡನೆ ಹೇಳಿ ಕಳುಹಿಸಿದ್ದನು.

ಸಲಪರಾಮನು ಇಚ್ಛಿನೀಕುಮಾರಿಯನ್ನು ಪೃಥ್ವೀರಾಜನಿಗೆ ಕೊಡಲು ನಿಶ್ಚಯಿಸಿ ವಚನಬದ್ಧನಾಗಿದ್ದನು. ಆದ್ದರಿಂದ ಅವನು ಭೀಮದೇವನ ನಿರೂಪವನ್ನು ಅಲ್ಲಗಳೆದನು. ಅಮರಸಿಂಹನ ಎಲ್ಲ ಉಪಾಯಗಳು ವ್ಯರ್ಥವಾಗಿ ಸುಮ್ಮನೆ ಹಿಂದಿರುಗಬೇಕಾಯಿತು. ಸಲಪರಾಮನ ಮಗನಾದ ಜೈತಸಿಂಹನು ಶೂರನೂ, ಅಭಿಮಾನಿಯೂ ಇದ್ದುದರಿಂದ, ಭೀಮದೇವನನ್ನು ಯುದ್ಧಕ್ಕೆ ಆಹ್ವಾನ ಮಾಡಿದನು.

ಇಚ್ಛಿನೀಕುಮಾರಿಯೂ ಪೃಥ್ವೀರಾಜನೂ ಪರಸ್ಪರರಲ್ಲಿ ಪ್ರಣಯವುಳ್ಳವರಾಗಿದ್ದರು. ಭೀಮದೇವನು ತನ್ನ ಪ್ರಣಯಿನಿಯನ್ನು ಬೇಡಿದ್ದಕ್ಕಾಗಿ ಪೃಥ್ವೀರಾಜನು ಅವನ ಮೇಲೆ ಕ್ಷುಬ್ಧನಾದನು. ಯುದ್ಧಪ್ರಸಂಗವೊದಗಿದರೆ ತನಗೆ ನೆರವಾಗಬೇಕೆಂದು ಸಲಪರಾಮನು ಜೈತಸಿಂಹನೊಡನೆ ಪೃಥ್ವೀರಾಜನಿಗೆ ಹೇಳಿ ಕಳುಹಿಸಿದ್ದನು. ಹಿಂದಕ್ಕೆ ಯುದ್ಧಭೂಮಿಯಲ್ಲಿ ತನ್ನ ತಂದೆಯಾದ ಸೋಮೇಶ್ವರನನ್ನು ಹಿಡಿದು ಕೊಲೆ ಮಾಡಿದ್ದರ ಹಾಗು ಇಚ್ಛಿನೀಕುಮಾರಿಯನ್ನು ಬಲುಮೆಯಿಂದ ಒಯ್ಯಬೇಕೆಂದು ಪ್ರಯತ್ನಿಸುತ್ತಿರುವ ಭೀಮದೇವನ ಮೇಲಿನ ಸೇಡನ್ನು ತೀರಿಸಿ

ಕೊಳ್ಳುವದಕ್ಕಾಗಿ ಅವನು ಪರಮಾರನಿಗೆ ಸಹಾಯ ಮಾಡಲೆಂದು ಸಂತೋಷದಿಂದ ಒಪ್ಪಿಕೊಂಡನು.

ಸಲಪರಾಮನಿಗೂ, ಭೀಮದೇವನಿಗೂ ಯುದ್ಧಪ್ರಸಂಗವೊದಗಿ ಕಡೆಗೆ ಭೀಮ ದೇವನು ಪರಾಜಿತನಾದನು. ಸಂಗ್ರಾಮದಲ್ಲಿ ಸಲಪರಾಮನು ಮೃತಪಟ್ಟನು. ಜೈತಸಿಂಹನು ತನ್ನ ಭಗಿನಿಯನ್ನು ಪೃಥ್ವೀರಾಜನಿಗೆ ಧಾರೆಯೆರೆದು ಕೊಟ್ಟನು. ಇದೇ ಕಾರಣದಿಂದ ಪೃಥ್ವೀರಾಜ-ಭೀಮದೇವರಲ್ಲಿ ವೈರವು ನೆಲೆಗೊಂಡಿತ್ತು. ಪ್ರಸಂಗವೊದಗಿದಾಗ ಪೃಥ್ವೀರಾಜನ ಸೇಡು ತೀರಿಸಿಕೊಳ್ಳುವದಕ್ಕಾಗಿ ಭೀಮ ದೇವನು ಹೊಂಚುಹಾಕಿಕೊಂಡೇ ಕುಳಿತಿದ್ದನು. ಬಲಾಢ್ಯನಾದ ಅವನನ್ನು ಒಬ್ಬನೇ ಕೆಣಕುವದಾಗದ್ದಕ್ಕೆ ಪರಸಹಾಯ ಪ್ರತೀಕ್ಷೆ ಮಾಡತೊಡಗಿದ್ದನು. ಇಂತಹ ಸ್ಥಿತಿ ಯಲ್ಲಿ ಜಯಚಂದ್ರನ ವಿನಂತಿ ಮಾನ್ಯಮಾಡುವದಕ್ಕೆ ಅವನು ಹಿಂದು ಮುಂದೆ ನೋಡುವನೇಕೆ? ವೈದ್ಯನು ಹೇಳಿದ್ದೂ ರೋಗಿಯು ಬಯಸಿದ್ದೂ ಒಂದಾದ ಮೇಲೆ, ಕೇಳುವದೇನು?

ತಾರುಣ್ಯದೆಶೆಯಲ್ಲಿದ್ದ ಪೃಥ್ವೀರಾಜನಿಂದ ವಯೋಮಾನಕ್ಕನುಗುಣವಾಗಿ ಕೆಲವು ಅನುಚಿತ ಕೃತಿಗಳು ಘಟಿಸಿದ್ದವು. ಅವನು ತನ್ನ ಕೈಕೆಳಗಿನ ಎಷ್ಟೋ ಜನ ಸರದಾರರಿಗೆ ಅನೇಕ ಬಗೆಯಿಂದ ತೊಂದರೆ ಕೊಟ್ಟಿದ್ದನು. ಪರಾಕ್ರಮಿಯೂ, ರಾಜ ನಿಷ್ಠನೂ, ಕರ್ತವ್ಯಪ್ರಭಾವಶಾಲಿಯೂ, ರಾಜಕಾರ್ಯ ಧುರಂಧರನೂ ಆದ ಕೈಮಾ ಷನೆಂಬ ಮಂತ್ರಿಯನ್ನು ಅವನು ಕೊಲೆ ಮಾಡಿಸಿದ್ದನು. ದಿಲ್ಲಿಯ ಸಾಮ್ರಾಜ್ಯದ ಆಧಾರಸ್ತಂಭವಾಗಿದ್ದ ಚಾಮುಂಡರಾಯನನ್ನು ಅವನು ಎಷ್ಟೋ ದಿವಸಗಳ ವರೆಗೆ ಸೆರೆಯಲ್ಲಿಟ್ಟಿದ್ದನು. ಹೀಗೆ ಕೆಲವು ಅನುಚಿತ ಕೃತ್ಯಗಳು ಪೃಥ್ವೀರಾಜನಿಂದ ಘಟಿ ಸಿದ್ದವು. ಅನುಕೂಲ ಪರಿಸ್ಥಿತಿಯಿರುವವರಿಗೆ ಯಾವ ಬಗೆಯ ಅಪರಾಧಗಳಾದರೂ ಮುಚ್ಚಿಹೋಗುತ್ತವೆ; ಅದೇ ಪ್ರತಿಕೂಲ ಪರಿಸ್ಥಿತಿಯೊದಗಿತೆಂದರೆ ಕಡ್ಡಿಯು ಗುಡ್ಡವಾಗಿ ನಿಲ್ಲುತ್ತದೆ!

ಜಯಚಂದ್ರನು ಪೃಥ್ವೀರಾಜನ ಮೇಲೆ ಕುನಸುಗೊಂಡಿದ್ದ ಎಲ್ಲ ಅರಸರನ್ನೂ ಸರದಾರ-ಮಾಂಡಲಿಕರನ್ನೂ ತನ್ನ ಕಡೆಗೆ ಒಲಿಸಿಕೊಂಡನು. ಭೀಮದೇವನೊ ಬ್ಬನು ತನ್ನ ಸಹಾಯಕ್ಕೆ ಬರಲೊಪ್ಪಿದರೆ ಅರ್ಧ ಕೆಲಸವಾಯಿತೆಂದು ಅವನು ಭಾವಿಸಿಕೊಂಡಿದ್ದನು. ಇನ್ನುಳಿದ ಅರ್ಧ ಕೆಲಸವನ್ನು ಅವನು ಬೇರೆ ರೀತಿಯಿಂದ ಮಾಡಬೇಕಾಗಿತ್ತು. ಆಸುರೀಭಾವವನ್ನು ತಳೆದ ಜಯಚಂದ್ರನು ಪೃಥ್ವೀರಾಜ ನನ್ನೂ ಅವನ ರಾಜ್ಯವನ್ನೂ ನಿರ್ನಾಮಗೊಳಿಸಿ, ತನ್ನ ಪೈಶಾಚ್ಯ ಭಾವನೆಯನ್ನು ತೃಪ್ತಪಡಿಸಿಕೊಳ್ಳಬೇಕಾಗಿತ್ತು.

ಭೀಮದೇವನು ಜಯಚಂದ್ರನ ವಿನಂತಿಯನ್ನು ಮಾನ್ಯಮಾಡಿದನು. ಅವನು ಅತ್ಯಂತ ಸಂತೋಷದಿಂದ ಪೃಥ್ವೀರಾಜನೊಡನೆ ಯುದ್ಧಕ್ಕೆ ಸಜ್ಜಾದನು. ಅನಂತರ ಶಹಾಬುದ್ದೀನ ಘೋರಿಯ ಸಹಾಯ ಬೇಡಬೇಕೆಂದು ಅವನು ಜಯಚಂದ್ರನಿಗೆ ತಿಳಿಸಿದನು. ಜಯಚಂದ್ರನಾದರೂ ಅದೇ ಹವಣಿಕೆಯಲ್ಲಿದ್ದನು. ಶಹಾಬುದ್ದೀನನನ್ನು ಸಹಾಯಕ್ಕೆ ಕರೆಯಿಸಿಕೊಳ್ಳಬೇಕೆಂದು ಭೀಮದೇವನು ತಿಳಿಸಿದ ಕೂಡಲೆ, ಅವನು ತನ್ನ ಸರದಾರನಾದ ಕುವರಸಿಂಹನನ್ನು ಗಿಝನಿಗೆ ಕಳಿಸಿದನು.

ಗಿಝನಿಯಲ್ಲಿ ಘೋರಿಯ ಯುದ್ಧದ ಸೌರಣೆಯು ಒಳ್ಳೆಯ ಭರದಿಂದ ಸಾಗಿತ್ತು. ಪೃಥ್ವೀರಾಜನೊಡನೆ ಯುದ್ಧ ಮಾಡಬೇಕೆಂದು ಅವನ ಬಾಹುಗಳು ಸ್ಫುರಣಹೊಂದತೊಡಗಿದ್ದವು. ಸಂಗ್ರಾಮಶಾರ್ದೂಲನಾದ ಪೃಥ್ವೀರಾಜನೆದುರಿಗೆ ಏಕಾಕಿಯಾಗಿ ಎದುರಾಳಿಯೆಂದು ನಿಲ್ಲುವದು ಅನ್ಯ ದೇಶವಾದ ಹಿಂದುಸ್ತಾನದಲ್ಲಿ ಅಹಿತವೆಂದು ಅವನ ಮಂತ್ರಿಸೇನಾಪತಿ ಮಂಡಳವು ಅಭಿಪ್ರಾಯವಿತ್ತದ್ದರಿಂದ, ಯಾರಾದರೂ ತನ್ನನ್ನು ಸಹಾಯಕ್ಕೆ ಕರೆಯುವರೋ-ಏನೋ ಎಂಬದನ್ನು ಅವನು ಆತುರದಿಂದ ನಿರೀಕ್ಷಿಸತೊಡಗಿದ್ದನು. ಪೃಥ್ವೀರಾಜನೊಡನೆ ಯುದ್ಧ ಮಾಡುವದಕ್ಕಾಗಿ ಜಯಚಂದ್ರ-ಭೀಮದೇವ ಮೊದಲಾದ ಬಲಾಢ್ಯರು ಸಿದ್ಧವಾದ ಮೇಲೆ, ಅವರಿಗೆ ನೆರವಾಗಿ ತನ್ನ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವದಕ್ಕೆ ಅವನು ಹಿಂಜರಿಯುವನೆ?

ಜಯಚಂದ್ರನ ಪ್ರತಿನಿಧಿಯಾದ ಕುವರಸಿಂಹನು ಶಹಾಬುದ್ದೀನನ ಓಲಗಕ್ಕೆ ಬಂದನು. ಅವನು ತನ್ನ ಒಡೆಯನು ಕೊಟ್ಟಿದ್ದ ವಿನಂತಿಪತ್ರಿಕೆಯನ್ನು ಸುಲ್ತಾನನ ಸ್ವಾಧೀನ ಮಾಡಿ—"ಖಾವಿಂದ, ಜಯಚಂದ್ರ ಮಹಾರಾಜರು ನಿಮ್ಮ ಮೇಲೆಯೇ ಅವಲಂಬಿಸಿ ಕುಳಿತಿರುವರು. ನೀವು ಅವರಿಗೆ ನೆರವಾದರೆ, ನಿಮಗೆ ಅದರ ಲಾಭವು ದೊರೆಯದಿರಲಾರದು. ನಮಗೆ ಪೃಥ್ವೀರಾಜನು ಹೇಗೆ ವೈರಿಯಿರುವನೋ, ಅದರಂತೆ ನಿಮಗಾದರೂ ಇರುವನು. ನೆರೆದ ಸಭೆಯಲ್ಲಿ ನಿಮ್ಮಂತಹ ಬಲಾಢ್ಯ ರಾಜರಿಂದ ಕ್ಷಮೆಬೇಡಹಚ್ಚಿದ ಬಗ್ಗೆ ನಿಮ್ಮಲ್ಲಾದರೂ ಸೇಡು ತೀರಿಸಿಕೊಳ್ಳುವ ಭಾವನೆಯು ಹುಟ್ಟಿರಲಿಕ್ಕೇಬೇಕು. ಹೇಗಾದರೂ ಮದಾಂಧನಾದ ಪೃಥ್ವೀರಾಜನನ್ನು ಯುದ್ಧದಲ್ಲಿ ಸೋಲಿಸಿ ಕೊಲ್ಲಲಿಕ್ಕೇ ಬೇಕಾಗಿರುವದು. ನೀವು ಮಹಾರಾಜರ ವಿನಂತಿಯನ್ನು ಮನ್ನಿಸುವಿರೆಂದು ನಂಬಿರುವೆನು."

ಶಹಾಬುದ್ದೀನನು ಜಯಚಂದ್ರನ ಪತ್ರವನ್ನೋದಿದನು. ಅವನು ತನಗೂ ಪೃಥ್ವೀರಾಜನಿಗೂ ವೈರ ಹುಟ್ಟಿದ ಸಂಗತಿಯನ್ನು ಸಂಕ್ಷಿಪ್ತವಾಗಿ ವರ್ಣಿಸಿ, ತನಗೆ ಸಹಾಯ ಮಾಡುವ ಬಗ್ಗೆ ಬಲುಪರಿಯಾಗಿ ಬೇಡಿಕೊಂಡಿದ್ದನು. ಸಹಾಯಮಾಡಿ

ದ್ದಕ್ಕೆ ಯೋಗ್ಯ ಪ್ರತಿಫಲ ದೊರೆಯದಿರಲಾರದೆಂದೂ ಅವನು ಬರೆದಿದ್ದನು. ಪತ್ರದ ಸಂಗತಿಯನ್ನು ನೋಡಿ ಘೋರಿಯು ಸಂತೋಷಬಟ್ಟು:—"ಕುವರಸಿಂಹ, ಕಾಫರರನ್ನು ನಂಬುವದಕ್ಕೆ ಮನಸ್ಸು ಹಿಂಜರಿಯುತ್ತದೆ. ಪ್ರಸಂಗ ವಿಶೇಷದಲ್ಲಿ ನೀವೆಲ್ಲರೂ ಒಂದಾಗಿ ನಮ್ಮನ್ನು ಸಂಕಟಕ್ಕೀಡುಮಾಡುವಿರೆಂದು ನನಗೆ ನಂಬಿಗೆಯಾಗಿದೆ. ಹಿಂದಿನ ಯುದ್ಧದಲ್ಲಿ ನಿಮ್ಮ ಮಹಾರಾಜರು ಸಹಾಯಮಾಡಿದ್ದರೆ, ನನಗೆ ಕ್ಷಮೆ ಬೇಡುವ ಪ್ರಸಂಗವೊದಗುತ್ತಿರಲಿಲ್ಲ. ಚಿತ್ರರೇಖೆಯು ಕನೋಜದಲ್ಲಿ ಎಷ್ಟೋ ದಿನಗಳ ವರೆಗೆ ಇದ್ದಳೆಂದು ಕೇಳುತ್ತೇನೆ. ಈ ಮಾತು ನಿಜವಿದ್ದರೆ, ಅವರು ಅವಳನ್ನು ನನ್ನ ಕಡೆಗೆ ಕಳಿಸಬಾರದಿತ್ತೇಕೆ? ನಿಮ್ಮ ರಾಜನಿಗೆ ಸಹಾಯ ಮಾತ್ರ ಬೇಕು; ಆದರೆ ಸಹಾಯ ಮಾಡುವಂತೆ ಜನರ ಮನಸ್ಸನ್ನು ಹೇಗೆ ಒಲಿಸಿಕೊಳ್ಳಬೇಕೆನ್ನುವದು ತಿಳಿಯುವದಿಲ್ಲ."

"ಖುದಾವಂತ, ಈ ಸಾರೆಯ ಸಂಗ್ರಾಮದಲ್ಲಿ ಎಲ್ಲರ ಇಚ್ಛೆಗಳು ತಾವಾಗಿಯೇ ಪೂರ್ಣವಾಗುವವು. ಈ ಮಾತಿನಲ್ಲಿ ಸಂದೇಹಪಡಬೇಡಿರಿ."

ಶಹಾಬುದ್ದೀನ ಘೋರಿಯು ಪೃಥ್ವೀರಾಜನ ಮೇಲೆ ದಂಡೆತ್ತಿ ಬರುವದಕ್ಕೆ ಒಪ್ಪಿದನು. ಗೃಹಕಲಹದ ಹೊತ್ತುತ್ತಿರುವ ಅಗ್ನಿಯು ಮತ್ಸರದ ಗಾಳಿಯಿಂದ ಉರಿಯಾಗಿ, ಕುನಸಿನ ಎಣ್ಣೆಯು ಎರಚಲ್ಪಟ್ಟು ಅತ್ಯಂತ ಪ್ರಜ್ವಲಿತವಾಯಿತು. ಈ ಜಾಜ್ವಲ್ಯಮಾನವಾದ ಒಳಜಗಳದ ಉರಿಯು ಭಾರತದ ಸ್ವಾತಂತ್ರ್ಯ ಸೂರ್ಯನನ್ನು ಅಸ್ತಗೊಳಿಸದಿರುವದೆ?

———

"ಸಂಯುಕ್ತೆ, ನೀನು ಬಂದಾಗಿನಿಂದ ಮಹಾರಾಜರ ಮನಸ್ಸು ಒಂದು ಬಗೆಯಾಗಿರುವದು. ಅವರು ಮೊದಲು ಎಷ್ಟು ಕರ್ತವ್ಯದಕ್ಷರಿದ್ದರೋ, ಈಗ ಅಷ್ಟೇ,
ಕಿಂಬಹುನಾ ಅದಕ್ಕಿಂತ ಹೆಚ್ಚಾಗಿ ಕರ್ತವ್ಯಪರಾಙ್ಮು
ಖರಾಗಿರುವರು. ರಾಜ್ಯ ವಿಷಯಲೋಲುಪ ನರೇಶ. ಶಕಟ ಸಾಗಿಸುವವರು ಈ
ಪರಿಯಾಗಿ ವಿಷಯನಿಮ ಗ್ನರಾಗುವದು ಅನುಚಿತ
ವಲ್ಲವೆ? ಅವರ ಮೇಲೆ ಎಷ್ಟು ಕರ್ತವ್ಯಭಾರವಿರುವದೆಂಬದರ ಪರಿವೆಯು ನಿನಗಾದರೂ ಇದ್ದಂತೆ ಕಾಣುವದಿಲ್ಲ. ಅವರ ಸೆಳವಿಗೆ ಸಿಲುಕಿ, ಅದರಂತೆ ಹರಿದಾಡುವ ನಿನ್ನನ್ನು ನೋಡಿ ನನ್ನಲ್ಲಿ ಸಂತಾಪ ಹುಟ್ಟಿರುವದು. ದಿಲ್ಲಿಯ ಸಾಮ್ರಾಜ್ಯಕ್ಕೆ ಈಗ ವೈರಿಗಳು ಹೆಚ್ಚಾಗಿದುವರು. ಇವರ ಮೇಲೆ ನಿಮ್ಮ ತಂದೆಯು ಬೆಂಕಿಯನ್ನು ಕಾರುತ್ತಿರುವನು. ಶಹಾಬುದ್ದೀನ ಘೋರಿಯಾದರೂ ದಂಡೆತ್ತಿ ಬರಬೇಕೆಂಬ ಪ್ರಯತ್ನನಡೆಸಿರುವನಂತೆ! ಇಂತಹ ಪ್ರಸಂಗದಲ್ಲಿ ರಾಜಕಾರಣದ ಕಡೆಗೆ ದುರ್ಲಕ್ಷಿ

ಸಿದರೆ ಅನರ್ಥವಾಗುವದೆಂಬ ಮಾತು ನಿನಗಾದರೂ ತಿಳಿಯಬಾರದೆ? ಯಾವದೊಂದು ದುರ್ಭಾವನೆಯಿಂದ ನಾನು ಹೀಗೆ ಮಾತನಾಡುವೆನೆಂದು ಮಾತ್ರ ನೀನು ತಿಳಿಯಬೇಡ. ವಿಷಯಾಂಧರಾದ ಪತಿಗಳನ್ನು ವಿವೇಕಿಗಳಾದ ಸತಿಯರು ಹಾದಿಗೆ ತರಬೇಕಲ್ಲವೆ? ನನಗಿಂತಲೂ ನಿನ್ನ ಮಾತಿನ ಮೇಲೆ ಮಹಾರಾಜರು ಹೆಚ್ಚಾಗಿ ನಂಬಿಗೆಯನ್ನಿಡುವವರಿಂದಲೇ ಅವರನ್ನು ಜಾಗ್ರತೆಗೊಳಿಸಲೆಂದು ನಿನಗೆ ಹೇಳಿದೆನು."

"ಅಕ್ಕಾ, ಇಚ್ಛಿನೀದೇವಿ, ನನಗಷ್ಟು ತಿಳಿಯುವದಿಲ್ಲೆಂದು ನಿನ್ನ ಕಲ್ಪನೆಯಿರುವದೇನು? ನಾನು ಎಷ್ಟು ರೀತಿಯಿಂದ ಹೇಳಿದರೂ ಮಹಾರಾಜರು ರಾಜ್ಯಕಾರ್ಯದಲ್ಲಿ ಮನಸ್ಸು ಹಾಕದಾಗಿರುವರು. ಅವರು ಈಗ ಕಾರ್ಯಭಾರದ ವಿಷಯವಾಗಿ ಮನಸ್ಸು ತೆಗೆದಿರುವದರಿಂದ ರಾಜ್ಯದಲ್ಲಿ ಶಿಥಿಲತೆಯುಂಟಾಗಿರುವದು; ವೈರಿಗಳ ಪುಂಡಾಟಿಕೆಯ ಸೊಲ್ಲು ಕೇಳತೊಡಗಿರುವದು; ಆದರೆ ಮಾಡಲೇನು? ನನ್ನ ಮಾತನ್ನು ಅವರು ಕೇಳುವದೇ ಇಲ್ಲ; ಈ ಸಂಧಿಯಲ್ಲಿ ಏನಾದರೂ ರಾಜ್ಯಕ್ಕೆ ಅನರ್ಥವೊದಗಿದರೆ, ಅದರ ಅಪವಾದ ನನ್ನ ತಲೆಯ ಮೇಲೆ ಬರುವದೆಂಬ ಭಯವು ನನಗೂ ವಿಶೇಷವಾಗಿರುವದು. ವನವಿಹಾರ-ನೌಕಾವಿಹಾರ ಮೊದಲಾದ ವಿಲಾಸಗಳಲ್ಲಿಯೇ ಅವರು ಕಾಲಕಳೆಯತೊಡಗಿರುವದರಿಂದ ರಾಜ್ಯದಲ್ಲಿ ಅವ್ಯವಸ್ಥೆಯು ನೆಲೆಗೊಳ್ಳತೊಡಗಿರುವರು. ಅವರು ರಾಜ್ಯಭಾರದ ವಿಷಯವಾಗಿ ಅನಾಸಕ್ತಭಾವವನ್ನು ತಳೆದಿರುವದರಿಂದ ಅನೇಕ ಬಗೆಯ ಸಂಕಟಗಳೊದಗುವ ದುಶ್ಚಿಹ್ನಗಳು ತೋರತೊಡಗಿರುವವು. ಅದಕ್ಕಾಗಿಯೇ ನಾನು ಮೇಲಿಂದ ಮೇಲೆ ಅವರನ್ನು ಜಾಗ್ರತೆಗೊಳಿಸುತ್ತಿರುವೆನು. ಅಕ್ಕಾ, ಅವರು ನನ್ನ ಮಾತನ್ನು ಅಲಕ್ಷಿಸುತ್ತಿರುವಾಗ ಯತ್ನವೇನಿರುವದು?"

"ಏನು? ಮಹಾಜನರು ನಿನ್ನ ಮಾತನ್ನೂ ಕೇಳುವದಿಲ್ಲವೆ? ಸುಳ್ಳುಮಾತನ್ನಾಡುವೆ. ನಿನ್ನಾಜ್ಞೆಯು ಅವರಿಗೆ ದೇವಾಜ್ಞೆಗಿಂತಲೂ ಮಿಗಿಲಾಗಿರುವದು. ನಾನು ಮತ್ಸರಗ್ರಸ್ತ ಭಾವನೆಯಿಂದ ಹೀಗಾಡುವೆನೆಂದು ಮಾತ್ರ ತಿಳಿಯಬೇಡ. ನವದಂಪತಿಗಳಾದ ನಿಮ್ಮ ವಿಷಯದಲ್ಲಿ ಅಪ್ರೀತಿಯುಳ್ಳವಳು ನಾನಲ್ಲವೆಂಬ ಮಾತು ನಿನಗಾದರೂ ಗೊತ್ತಿರುವದು. ಅವರನ್ನು ಹಾದಿಗೆ ತರುವದು ನಿನಗೆ ಅಸಾಧ್ಯವಿರುವದಿಲ್ಲ."

"ಅಕ್ಕಾ, ನಿನಗೆ ಹಾಗೆ ತೋರುತ್ತಿರಬಹುದು. ಅವರು ನನ್ನ ಮಾತನ್ನು ಕೇಳುತ್ತಿರುವದು ನಿಜವು. ನಾನು ಅವರನ್ನು ಜಲವಿಹಾರಕ್ಕೆ ಕರೆದರೆ ಸಿದ್ಧರಿರುವರು: ಉದ್ಯಾನದಲ್ಲಿ ತಿರುಗಾಡಲಿಕ್ಕೆ ಕರೆದರೆ ತತ್ಕ್ಷಣವೇ ಬರುವರು; ಆದರೆ ಓಲಗಕ್ಕೆ ಹೋಗಿರೆಂದರೆ, ಕಣ್ಣು ಕೆಂಪಗೆ ಮಾಡುವರು!"

"ಸಂಯುಕ್ತೆ, ನೀನು ಇಂದು ಮಹಾರಾಜರೊಡನೆ ಕೈಗಡದ ಸಿಟ್ಟು ಧರಿಸು."

"ಆಗಲಿ; ನಿನ್ನ ಹೇಳಿಕೆಯಂತೆಯೇ ನಡೆಯುವೆನು."

ಸಂಯುಕ್ತೆಯೂ ಇಚ್ಛಿನೀಕುಮಾರಿಯೂ ಈ ಬಗೆಯಾಗಿ ಮಾತನಾಡುತ್ತ ಕುಳಿತಿದ್ದರು. ಪೃಥ್ವೀರಾಜನ ಮನಸ್ಸನ್ನು ರಾಜಕಾರಣದಲ್ಲಿ ತೊಡಗಿಸಬೇಕೆಂದು ಆ ಸವತಿಯರು ಯತ್ನಿಸತೊಡಗಿದರು. ವಿಷಯವ್ಯಾಮೋಹದಲ್ಲಿ ಸಿಲುಕಿ ಕರ್ತವ್ಯ ಪರಾಙ್ಮುಖನಾದ ಅವನನ್ನು ಹಾದಿಗೆ ತರದಿದ್ದರೆ ಕೇಡುಂಟಾಗದಿರದೆಂದು ಅವರು ಭಾವಿಸಿದ್ದರು. ಅವರೀರ್ವರೂ ಒಡಹುಟ್ಟಿದವರಂತೆ ನಡೆಯುತ್ತಿದ್ದರು. ಅವರಲ್ಲಿ ಯಾವ ಬಗೆಯ ಮತ್ಸರದ ಗಾಳಿಯೂ ಪ್ರವೇಶಿಸಿದ್ದಿಲ್ಲ. ಪೃಥ್ವೀರಾಜನಾದರೂ ಅವರೀರ್ವರಲ್ಲಿ ಸರಿಯಾದ ಪ್ರೇಮವುಳ್ಳವನಾಗಿದ್ದನು. ಇಚ್ಛಿನೀದೇವಿಗಿಂತ ಸಂಯುಕ್ತೆಯು ಚಿಕ್ಕವಳಿದ್ದು, ರಸಿಕಳಿದ್ದಳು. ನೂತನ ಪ್ರಣಯವಿದ್ದುದರಿಂದಲೇ ಅವನು ಸಂಯುಕ್ತೆಯೊಡನೆ ಹೆಚ್ಚಾಗಿ ಮಾತು-ಕಥೆ ನಡೆಸುತ್ತಿದ್ದನು. ವಿನೋದಿನಿಯಾದ ಅವಳಲ್ಲಿಯೇ ಪೃಥ್ವೀರಾಜನು ಹೆಚ್ಚು ವೇಳೆ ಕಳೆಯುತ್ತಿದ್ದನು. ಇಚ್ಛಿನೀಕುಮಾರಿಯು ಪತಿಯ ಈ ನಡತೆಯನ್ನು ನೋಡಿ ಅಸೂಯೆಗೊಳ್ಳುತ್ತಿರಲಿಲ್ಲ; ಸವತಿಯಾದ ಸಂಯುಕ್ತೆಯನ್ನು ಕಂಡರೆ ದ್ವೇಷಭಾವ ತಳೆಯುತ್ತಿದ್ದಿಲ್ಲ. ಪತಿಯು ಕರ್ತವ್ಯ ಹೀನನಾದುದರಿಂದ ಮಾತ್ರ ಅವಳು ಚಡಪಡಿಸುತ್ತಿದ್ದಳು. ಈ ವಿಚಾರವು ಸಂಯುಕ್ತೆಯಲ್ಲಾದರೂ ಹುಟ್ಟಿತ್ತು. ಅಂತೆಯೇ ಇಂದು ಅವರೀರ್ವರೂ ಪತಿಗೆ ಬುದ್ಧಿಗಲಿಸಬೇಕೆಂದು ನಿರ್ಧರಿಸಿಕೊಂಡಿದ್ದರು.

"ಸಂಯುಕ್ತೆ, ಇಂದು ನಿನ್ನ ದರ್ಶನವು ಅಪರೂಪವಾಗಿರುವದಿಲ್ಲ! ಇಷ್ಟು ಹೊತ್ತಿನ ವರೆಗೆ ಎಲ್ಲಿದ್ದೆ?" ಎಂದು ಪೃಥ್ವೀರಾಜನು ಅಲ್ಲಿಗೆ ಬಂದು ಸಂಯುಕ್ತೆಯನ್ನು ಕೇಳಿದನು.

"ಇಲ್ಲಿಯೇ ಇದ್ದೆನು" ಎಂದು ಸಂಯುಕ್ತೆ ಹೇಳಲು, ಇಚ್ಛಿನೀಕುಮಾರಿ: "ಯಾಕೆ? ಸಂಯುಕ್ತೆಯನ್ನು ಒಂದು ಪ್ರಹರ ಕೂಡ ಬಿಟ್ಟಿರುವದಾಗವೇ?"

"ಹಾಗಲ್ಲ, ಇಂದು ಯಾಕೋ ಬೇಸರವುಂಟಾಗಿವೆ. ಯಮುನೆಯಲ್ಲಿ ನೌಕಾ ವಿಹಾರ ಮಾಡಿದರೆ, ವಿಶ್ರಾಂತಿದೊರಕೀತೆಂದು ಇದು ವರೆಗೆ ಅವಳ ದಾರಿ ನೋಡಿದೆನು,"

"ನೌಕಾವಿಹಾರಕ್ಕೆ ಇವಳೇ ಏಕೆ ಬೇಕು?"

"ಪ್ರಿಯೇ, ಸಂಯುಕ್ತೆಯಿಲ್ಲದೆ ಜಲವಿಹಾರವು ಆನಂದದಾಯಕವಾಗಬಹುದೆ?"

"ನಡೆಯಿರಿ ನಾನು ಬರುವೆನು." ಎಂದು ಇಚ್ಛಿನೀಕುಮಾರಿಯು ನಗುತ್ತ ನುಡಿದಳು. "ನೀನೂ ನಡೆ."

"ಸಂಯುಕ್ತೆಯು ಬಂದರೆ ನಾನು ಬರುವವಳಲ್ಲ."

"ಇಚ್ಛಿನಿ, ಹೀಗೆ ಭೇದಭಾವವನ್ನು ಕಲ್ಪಿಸಬೇಡ. ನಾನು ಈರ್ವರಲ್ಲಿಯೂ ಸಮಾನ ಪ್ರೇಮವುಳ್ಳವನಾಗಿರುವೆನು."

"ಆದರೂ ಸಂಯುಕ್ತೆಯೇ ನಿಮಗೆ ಮೇಲಿಂದ ಮೇಲೆ ಬೇಕು."

"ವೇಳೆಗಳೆಯುತ್ತ ಕುಳಿತುಕೊಳ್ಳುವಂತಿಲ್ಲ. ವಿನೋದವು ನೌಕೆಯಲ್ಲಿಯೇ ನಡೆಯಲಿ. ಇಂದು ಸಂಯುಕ್ತೆಯ ದರ್ಶನವಿಲ್ಲದ್ದಕ್ಕಾಗಿ ಬಹಳೇ ಬೇಸರವುಂಟಾಗಿರುವದು. ಈರ್ವರೂ ನಡೆಯಿರಿ. ಯಮುನಾ ತಟಾಕಕ್ಕೆ ಹೋಗೋಣ."

"ಹೋಗೋಣವಂತೆ ಕುಳಿತುಕೊಳ್ಳಿರಿ. ನಿಂತೇ ಮಾತಾಡತೊಡಗಿರುವಿರಲ್ಲ?" ಎಂದು ಸಂಯುಕ್ತೆಯು ಪತಿಯ ಕರವನ್ನು ಹಿಡಿದು, ಮಂಚದ ಮೇಲೆ ಕುಳ್ಳಿರಿಸಿ ತಾನೂ ಕುಳಿತಳು. ಆ ಮೇಲೆ ಇಚ್ಛಿನೀಕುಮಾರಿಯು ಪತಿಯ ಬಲಭಾಗದಲ್ಲಿ ಕುಳಿತುಕೊಂಡು:—"ನೋಡಿರಿ, ನೀವು ಸಂಯುಕ್ತೆಯ ಸೂತ್ರದ ಗೊಂಬೆಯಾಗಿರುವಿರಿ; ಹೀಗಿದ್ದೂ ಈರ್ವರಲ್ಲಿ ಸಮನಾಗಿ ಪ್ರೇಮವುಳ್ಳವರಾಗಿರುವೆವೆಂದು ಹೇಳುವಿರಿ. ನಿಮ್ಮ ಈ ಭೇದಭಾವವು ಒಡೆದು ಕಾಣುವಂತಿರುವದಿಲ್ಲವೆ?"

"ಇಚ್ಛಿನಿ, ಹಾಸ್ಯವಾಡತೊಡಗಿದೆಯಾ?"

"ಪ್ರಿಯನಾಥರೆ, ಆ ಮಾತಿರಲಿ. ನೀವು ಯಾವಾಗಲೂ ವಿಲಾಸದಲ್ಲಿಯೇ ವೇಳೆಗಳೆಯತೊಡಗಿ ರಾಜಕಾರಣದ ಕಡೆಗೆ ತೀರ ದುರ್ಲಕ್ಷಿಸತೊಡಗಿರುವಿರಿ. ಈ ನಿಮ್ಮ ಆಚರಣೆಯು ಅನಿಷ್ಟವಲ್ಲವೆ?" ಎಂದು ಸಂಯುಕ್ತೆಯು ಕೇಳಿದಳು

"ಸಂಯುಕ್ತೆ! ನಿನ್ನ ಮಾತಿನ ಅರ್ಥವೇ ಆಗಲೊಲ್ಲದು! ನೀನೇನು ಹೇಳುವೆ?"

ಸಂಯುಕ್ತೆಯ ಮಾತುಗಳನ್ನು ಕೇಳಿ ಪೃಥ್ವೀರಾಜನು ವಿಸ್ಮಿತನಾಗಿ ಹೀಗೆ ನುಡಿದ ಕೂಡಲೆ, ಇಚ್ಛಿನೀಕುಮಾರಿಯು ನಡುವೇ ಬಾಯಿ ಹಾಕಿ:—"ನಿಮಗೆ ಹೇಗೆ ತಿಳಿಯುವದು? ದೇಶದಲ್ಲಿ ಯಾವ ಯಾವ ಕಾರಸ್ಥಾನಗಳು ನಡೆದಿರುವವೆಂಬದನ್ನು ತಿಳಿದುಕೊಳ್ಳುವದಕ್ಕೆ ನಿಮಗೆ ಅವಕಾಶವೇ ಇಲ್ಲ."

"ಮನಸ್ಸಿಗೆ ನಡುವ ಮಾತನ್ನಾಡಬೇಡ. ಇಚ್ಛಿನೀ, ಸ್ಪಷ್ಟವಾಗಿ ಹೇಳು."

"ಪ್ರಿಯಕರಾ! ನಿಮ್ಮ ಮೇಲೆ ಸಾಗಿ ಬರುವದಕ್ಕಾಗಿ ನನ್ನ ತಂದೆಯೂ ಭೀಮದೇವನೂ ಸಿದ್ಧತೆ ನಡೆಸಿರುವರೆಂಬ ವಾರ್ತೆಯಿರುವದು. ನೀವು ಕೇವಲ ಸ್ವಚ್ಛಂದ ವೃತ್ತಿಯಲ್ಲಿಯೇ ಕಾಲ ಕಳೆಯುತ್ತಿರುವದರಿಂದ, ದೇಶದಲ್ಲೆಲ್ಲ ಅವ್ಯವಸ್ಥೆ ನೆಲೆಗೊಳ್ಳತೊಡಗಿರುವದು. ಇನ್ನು ಮೇಲಾದರೂ ರಾಜ್ಯಭಾರದ ಕಡೆಗೆ ಲಕ್ಷ್ಯಗೊಡಿರಿ."

ಸಂಯುಕ್ತೆಯು ವಿನಯದಿಂದ ಹೀಗೆ ನುಡಿದ ಕೂಡಲೆ ಪೃಥ್ವೀರಾಜನು ನಸುನಕ್ಕನು. ತನ್ನ ಪತ್ನಿಯರ ಮಾತಿನ ಮರ್ಮವು ಈಗ ಅವನಿಗೆ ಚನ್ನಾಗಿ

ತಿಳಿಯಿತು. ಪರಕೀಯರ ದಾಳಿಗಳಿಗೆ ಬೆದರಿ ಇವರು ಹೀಗೆ ಮಾತಾಡುವರೆಂದು ಅವನ ಕಲ್ಪನೆಯಾಯಿತು. ಆಗ ಅವನು ಸಂಯುಕ್ತೆಯನ್ನು ಕುರಿತು :—

"ಪ್ರಿಯೆ, ನನ್ನ ಮೇಲೆ ದಂಡೆತ್ತಿ ಬರುವ ಎದೆಯು ಅದಾವನದು? ಒಂದು ವೇಳೆ ಬಂದರೂ ಅದಕ್ಕೆ ನಾನು ಭಯಪಡುವಂತಹ ಅಳ್ಳೆದೆಯವನೆಂದು ನೀನು ತಿಳಿದಿರುವೆಯಾ? ಹುಚ್ಚೀ, ಈ ಪೃಥ್ವೀರಾಜನು ಯಾರಿಗೂ ಸೊಪ್ಪು ಹಾಕುವಂತಹನಿರುವದಿಲ್ಲ, ತಿಳಿಯಿತೇ? ರಾಜ್ಯಭಾರದ ವಿಷಯಕ್ಕಾಗಿ ನೀನು ಮಾತನಾಡಿದ್ದು ನಿಜವು. ಮಂತ್ರಿ-ಸೇನಾನಾಯಕರು ಅತ್ಯಂತ ಧೋರಣೆಗಳೂ, ಪ್ರಾಮಾಣಿಕರೂ, ಸ್ವಾಮಿನಿಷ್ಠರೂ ಇರುವವರಿಂದ ರಾಜ್ಯವ್ಯವಸ್ಥೆಯನ್ನು ಅತ್ಯುತ್ತಮ ರೀತಿಯಿಂದಿರಿಸುವರೆಂಬ ನಂಬಿಗೆ ನನಗಿದೆ. ಈ ವಿಷಯದಲ್ಲಿ ಯಾರೂ ಚಿಂತೆ ಮಾಡುವಂತಿಲ್ಲ" ಎಂದು ಪೃಥ್ವೀರಾಜನು ನುಡಿಯುತ್ತಿರಲು, ದ್ವಾರಪಾಲಕನು ಅಲ್ಲಿಗೆ ಬಂದು, ಚಾಮುಂಡರಾಯ ಸೇನಾಪತಿಗಳು ತಮ್ಮ ದರ್ಶನಕ್ಕಾಗಿ ಬಂದಿರುವರೆಂದು ಹೇಳಿದನು. ಆಗ ಪೃಥ್ವೀರಾಜನು ಅವನನ್ನು ಒಳಗೆ ಕಳಿಸುವದಕ್ಕಾಗಿ ಆಜ್ಞೆ ಮಾಡಿದನು.

ಕೂಡಲೆ ಚಾಮುಂಡರಾಯರು ಒಳಗೆ ಬಂದು ಮೂರು ಮೂರು ಸಾರೆ ಬಾಗಿ ನಮಿಸಿ "ಮಹಾರಾಜರೆ, ಗುಪ್ತಚರನು ವಿಲಕ್ಷಣವಾದ ವಾರ್ತೆ ತಂದಿರುವನು; ಅದನ್ನು ತಮ್ಮೆದುರಿನಲ್ಲಿ ಅರಿಕೆಮಾಡಿಕೊಳ್ಳುವದಕ್ಕಾಗಿ ಬಂದಿರುವೆನು."

"ಅದೇನು?" ಎಂದು ಪೃಥ್ವೀರಾಜನು ಉತ್ಕಂಠತೆಯಿಂದ ಕೇಳಿದನು.

"ತಮ್ಮ ವಿರುದ್ಧ ಭಯಂಕರ ಕಾರಸ್ಥಾನ ರಚಿಸಲ್ಪಡತೊಡಗಿರುವದಂತೆ!"

"ಸ್ಪಷ್ಟವಾಗಿ ಹೇಳಿರಿ; ಚಾಮುಂಡರಾಯ, ಏನು ಕಾರಸ್ಥಾನ ನಡೆದಿವೆ?"

"ಜಯಚಂದ್ರರಾಯರು ನಮ್ಮ ಮೇಲೆ ದಂಡೆತ್ತಿ ಬರುವ ವಿಚಾರದಲ್ಲಿರುವರಂತೆ. ಅವರು ಭೀಮದೇವನನ್ನು ತಮ್ಮ ಕಡೆಗೆ ಮಾಡಿಕೊಂಡು, ಶಹಾಬುದ್ದೀನ ಘೋರಿಯ ಸಹಾಯ ಬೇಡಿರುವರಂತೆ."

"ಶಹಾಬುದ್ದೀನನು ನನ್ನ ವಿರುದ್ಧ ಜಯಚಂದ್ರನಿಗೆ ಸಹಾಯ ಮಾಡುವನೆ? ಅಶಕ್ಯ; ಈ ಮಾತು ತೀರ ಅಶಕ್ಯ. ನನ್ನೊಡನೆ ಒಡಂಬಡಿಕೆ ಮಾಡಿಕೊಂಡವನು ತಿರುಗಿ ಬೀಳಲಾರನು. ಅವನಿಗೆ ಜೀವದಾನ ಮಾಡಿದ್ದನ್ನು ಮರೆತು, ಎಂದೂ ಕೃತಘ್ನನಾಗಲಾರನು."

"ಮಹಾರಾಜರೆ, ಅವನು ಸೈನ್ಯದ ಸಿದ್ಧತೆ ನಡೆಸಿರುವನೆಂದು ಗೊತ್ತಾಗಿರುವದು. ದಂಡಯಾತ್ರೆ ಮಾಡುವದಿರದಿದ್ದರೆ ಈ ಬಗೆಯಾಗಿ ಸೈನ್ಯದ ಸಿದ್ಧತೆಯೇಕೆ? ನಿಮ್ಮಂತೆ ಅವನು ಸರಳ ಮನಸ್ಸಿನವನಿದ್ದರೆ, ಕೃತಜ್ಞತೆಯುಳ್ಳವನಾಗಿರುತ್ತಿದ್ದನು. ಅವನು ಕಪಟಿಯೂ ಕಾರ್ಯಸಾಧಕನೂ ಕೃತಘ್ನನೂ ಇದ್ದದರಿಂದ, ಜಯಚಂದ್ರ

ರಾಜರ ವಿನಂತಿಯ ಮೇರೆಗೆ ದಂಡೆತ್ತಿ ಬರಬಹುದಾಗಿ ಕಾಣುವದು. ತಮ್ಮ ವಿರುದ್ಧ ದಂಡೆತ್ತಿ ಬರಬೇಕೆನ್ನುವ ಕಾರಸ್ಥಾನವು ಒಳ್ಳೆಯ ಭರದಿಂದ ನಡೆದಿರುವದೆಂದು ಗುಪ್ತಚರನು ವರ್ತಮಾನ ತಂದಿರುವದರಿಂದ ಜಾಗ್ರತೆಯಿಂದಿರುವದು ಒಳ್ಳೇದು."

ಚಾಮುಂಡರಾಯನು ಹೀಗೆ ಮಾತನಾಡಿದ ಕೂಡಲೆ ಪೃಥ್ವೀರಾಜನು ತ್ವೇಷ ಗೊಂಡನು. ಶತ್ರುಗಳು ದಂಡೆತ್ತಿ ಬರುವರೆಂದು ಇವನು ಭಯಭೀತನಾಗಿರುವ ನೆಂದು ಪೃಥ್ವೀರಾಜನು ತಿಳಿದನು. ಆಗ ಅವನು ನಿಷ್ಠುರತೆಯಿಂದ:--

"ಅದಕ್ಕೆ ನೀವೇಕೆ ಇಷ್ಟು ಭಯಗೊಳ್ಳುವಿರಿ? ನೀವು ಸೇನಾಪತಿಗಳಿದ್ದು ಸೈನ್ಯದ ಸಿದ್ಧತೆ ಚೆನ್ನಾಗಿ ಮಾಡಲಿಕ್ಕೆ ಆಗುವದಿಲ್ಲವೇ? ಎಲ್ಲ ಕಡೆಯಲ್ಲಿಯೂ ನನ್ನ ಲಕ್ಷ್ಯವೇ ಹೇಗೆ ಪೂರೈಸಬೇಕು? ಎಲ್ಲ ಭಾರವೂ ನಿಮ್ಮ ಹಾಗೂ ಮಂತ್ರಿಗಳ ಮೇಲೆಯೇ ಇರುವದು. ಇಲ್ಲದ ಗೊಂದಲದಲ್ಲಿ ಬೀಳುವದಕ್ಕೆ ಸದ್ಯ ನನಗೆ ಅವಕಾಶವಿಲ್ಲ."

ಪೃಥ್ವೀರಾಜನ ಮಾತುಗಳನ್ನು ಕೇಳಿ ಚಾಮುಂಡರಾಯನು ವಿಸ್ಮಿತನಾದನು. ವಿಷಯಲೋಲುಪನಾದ ಇವನು ಸ್ವಕರ್ತವ್ಯವನ್ನು ಪೂರ್ಣವಾಗಿ ಮರೆಯ ತೊಡಗಿದ್ದನ್ನು ನೋಡಿ ವಿಷಾದಗೊಂಡನು. ಅರಸನೆದುರಿಗೆ ಹೆಚ್ಚು ಮಾತಾಡುವ ಯೋಗ್ಯತೆ ಅವನಲ್ಲಿರದ್ದರಿಂದ ನಿರುತ್ತರನಾಗಿ ಅಲ್ಲಿಂದ ಹೊರಟು ಹೋದನು.

"ಸಂಯುಕ್ತೇ, ಇಚ್ಛನೀ, ನಡೆಯಿರಿ; ನೌಕಾವಿಹಾರಕ್ಕಾಗಿ ಯಮುನಾತೀರಕ್ಕೆ ಹೋಗೋಣ." ಎಂದು ಪೃಥ್ವೀರಾಜನು ತನ್ನ ಪತ್ನಿಯರೀರ್ವರನ್ನೂ ಕರೆದು ಕೊಂಡು ಹೊರಟನು. ಶತ್ರುಗಳು ದಂಡೆತ್ತಿ ಬರುವರೆಂಬ ಸಂಗತಿಯು ಗೊತ್ತಾ ದರೂ ಆ ವಿಷಯಲೋಲುಪ ನರೇಶನಿಗೆ ಅದರ ಪರಿವೆಯೇ ಇದ್ದಿಲ್ಲ. ವಿಷಯಾಂ ಧರಿಗೆ ಇಂತಹ ಸಂಗತಿಗಳಲ್ಲಿ ಮನಸ್ಸು ಹಾಕುದಸಕ್ಕೆ ಅವಕಾಶವೆಲ್ಲಿ?

---

ಇದೆಂತಹ ತಾಮಸ ಹೃದಯ! ಇದೆಂತಹ ರಾಕ್ಷಸೀ ಲಾಲಸೆ! ಇದೆಂತಹ ಅಧಮ ತನ! ಇದೆಂತಹ ಪಿತೃ ಧರ್ಮ! ಇದೆಂತಹ ರಾಷ್ಟ್ರಾಭಿಮಾನ!

ಪ್ರಣಯಿಗಳು ಪ್ರೇಮ ಬಂಧನಕ್ಕೊಳಗಾಗುವದು ಅಪರಾಧವೆ? ಅನ್ಯಾಯವೆ? ಮಣ್ಣುಗೂಡುವ ಮನೋರಾಜ್ಯ ಸ್ವಯಂವರಕ್ಕೆ ಒಪ್ಪಿಗೆ ಕೊಟ್ಟು, ಕನ್ಯೆಯು ತನ್ನ ಪ್ರೇಮಪಾತ್ರನನ್ನು ವರಿ ಸಿದರೆ ಅದಕ್ಕಾಗಿ ಇಂತಹ ಕೋಲಾಹಲವೇಕೆ? ಇದೆಂತಹ ತಾಮಸ ಹೃದಯ!

ನಿಷ್ಕಾರಣವಾಗಿ ವೈರವನ್ನು ಕಲ್ಪಿಸಿ, ಶರೀರ ಸಂಬಂಧದಿಂದುಂಟಾದ ಬಾಂಧ ವ್ಯವನ್ನೂ ಸ್ವಜನಾನುರಾಗವನ್ನೂ ಮರೆತು ಅಸೂಯಾಪರನಾಗಿ ರಾಜ್ಯಲೋಭ

ಕ್ಕೊಳಪಟ್ಟು ಮನಬಂದಂತೆ ಗೊಂದಲವನ್ನೆಬ್ಬಿಸುವದು ನೀತಿಯೆ? ರೀತಿಯೆ? ಇದೆಂತಹ ರಾಕ್ಷಸೀ ಲಾಲಸೆ!

ತಾನು ಮಾಂಡಲಿಕನಿದ್ದರೂ ಸಾರ್ವಭೌಮನಿಗಿಂತ ಹೆಚ್ಚಾಗಿ ಮಾನದೊರೆಯ ಬೇಕೆಂಬ ದುರಭಿಮಾನದಿಂದ ವೈರಬಳೆಯಿಸಿ, ರಾಷ್ಟ್ರದಲ್ಲಿ ದ್ವೇಷಾಗ್ನಿಯನ್ನು ಪ್ರಜ್ವಲ ಗೊಳಿಸಿ, ಸ್ವಾರ್ಥಸಾಧನೆ ಮಾಡಿಕೊಳ್ಳುವದಕ್ಕಾಗಿ ಪ್ರಯತ್ನಿಸುವದು ಇದೆಂತಹ ಅಧಮತನ!

ಅನ್ಯ ಬಂಧನಗಳನ್ನೂ ಅನ್ಯ ಕಾರಣಗಳನ್ನೂ ಬದಿಗಿರಿಸಿ, ಹೊಟ್ಟೆಯ ಕರಳಿನ ಮೇಲೆಯಾದರೂ ದಯಾಪರನಾಗುವದು ಉಚಿತವಲ್ಲವೆ? ಮಗಳು ನಿರಪ ರಾಧಿಯಿದ್ದರೂ ಅವಳನ್ನು ಆಪತ್ತಿಗೆ ಗುರಿಮಾಡಬೇಕೆನ್ನುವದೂ, ಅವಳು ವೈಧವ್ಯ ಪಂಕದಲ್ಲಿ ಸಿಲುಕಿದ್ದನ್ನು ನೋಡುವದಕ್ಕಾಗಿ ಆತುರಬಡುತ್ತಿರುವದೂ ಅದೆಂತಹ ಪಿತೃಧರ್ಮ?

ಒಳಗಿನ ಜಗಳಕ್ಕಾಗಿ ಹೊರಗಿನವನನ್ನು ತಂದು, ಅವನಿಂದ ಸಹಾಯಹೊಂದಿ ಸ್ವಕೀಯರ ಮೇಲಿನ ಸೇಡುತೀರಿಸಿಕೊಳ್ಳುವದು ಹಿತಕರವೆ? ಪ್ರಸಂಗವಶದಿಂದ ಪರದೇಶಿಯು ತನ್ನನ್ನಾದರೂ ಪರದೇಶಿಯನ್ನಾಗಿ ಮಾತೃಭೂಮಿಗೆ ಹೊರತಾಗಿ ಮಾಡುವನೆಂಬದನ್ನು ಮರೆತು, ಅದೂರ ದೃಷ್ಟಿಯಿಂದಾಚರಿಸುವದಿದೆಂತಹ ರಾಷ್ಟ್ರಾಭಿಮಾನ!

ಜಯಚಂದ್ರಾ! ತಾಮಸ ಹೃದಯಿಯೂ, ರಾಕ್ಷಸೀ ದುರಾಕಾಂಕ್ಷೆಯವನೂ, ನರಾಧಮನೂ, ಸ್ವಜನದ್ರೋಹಿಯೂ, ರಾಷ್ಟ್ರಘಾತಕಿಯೂ ಆದ ನಿನ್ನಲ್ಲಿ ಮನು ಷ್ಯತ್ವವಿರುವದೆಂದು ಅದಾರು ಹೇಳುವರು?

ಮನುಷ್ಯನು ವಿವೇಕಭ್ರಷ್ಟನಾದನೆಂದರೆ ಅವನಿಂದ ಎಂತಹ ಹೀನ ಕೃತಿ ಗಳಾದರೂ ಘಟಿಸುತ್ತವೆ. ವಿಚಾರಶಕ್ತಿಯೇ ನಾಶವಾದ ಮೇಲೆ ಉಚಿತಾನುಚಿತ ಗಳ ಜ್ಞಾನವು ಹೇಗೆ ಬರಬೇಕು? ಮನುಷ್ಯನ ಮನೋವೃತ್ತಿಯು ಸ್ವಾಭಾವಿಕವಾಗಿ ಕೀಳು ಕೆಲಸದ ಕಡೆಗೆ ಎಳೆಯುತ್ತಿದ್ದರೆ, ವಿವೇಕವು ಆ ಮನೋಹರಿಯನ್ನು ತಡೆ ಯುತ್ತದೆ. ದುರ್ಭಾವನೆಗೆ ಪ್ರೋತ್ಸಾಹನೆ ದೊರೆತು ಆ ವಿವೇಕ ಬುದ್ಧಿಯೇ ನಷ್ಟ ವಾದ ಮೇಲೆ, ಮನುಷ್ಯನಿಂದ ಎಂತಹ ಕೃತಿಗಳು ಘಟಿಸಲಿಕ್ಕಿಲ್ಲ? ಸದ್ಯದಲ್ಲಿ ಜಯ ಚಂದ್ರನ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಪೃಥ್ವೀರಾಜನನ್ನು ನಾಶ ಮಾಡುವ ಕಾರ್ಯದಲ್ಲಿ ತನ್ನ ಸರ್ವಸ್ವವು ವಿಧ್ವಂಸವಾದರೂ ಅವನಿಗೆ ದುಃಖವಾಗುವಂತಿದ್ದಿಲ್ಲ.

ಪತಿಯ ಮನೋಭೂಮಿಕೆಯು ಇಂತಹ ಕುತ್ಸಿತ ಪ್ರಕಾರಗಳಿಂದ ಕಲಂಕಿತ ವಾಗಿದ್ದರೂ ವಿಪುಲಾದೇವಿ ಮಾತ್ರ ವಿವೇಕಭ್ರಷ್ಟಳಾಗಿರಲಿಲ್ಲ. ಸಂದಿದ ಮಾತಿಗಾಗಿ

ಅಷ್ಟೊಂದು ದೀರ್ಘದ್ವೇಷ ತಳೆಯುವದು ಅವಳ ಮನಸ್ಸಿಗೆ ಸರಿಯಾಗಿ ತೋರಲಿಲ್ಲ. ಸಂಯುಕ್ತೆಯ ವಿವಾಹದಿಂದ ಪೃಥ್ವೀರಾಜನು ಸ್ವಕೀಯನಾದನೆಂದೂ, ಅವನ ಮೇಲೆ ಕ್ಷುಬ್ಧವಾಗುವದು ಯೋಗ್ಯವಲ್ಲೆಂದೂ ಅವಳು ಭಾವಿಸಿದ್ದಳು. ತನ್ನ ಅಳಿಯನನ್ನು ಅಳಿಯುವದಕ್ಕಾಗಿ ಕಾಳಗದ ತಳಹದಿಯು ಉಂಟಾಗತೊಡಗಿದ್ದನ್ನು ನೋಡಿ ತಾಳಲಾರದೆ, ಅವಳು ಒಂದೇಸವನೆ ತಳಮಳಿಸತೊಡಗಿದ್ದಳು.

ವಿಪುಲಾದೇವಿಯು ವಿಮನಸ್ಕಳಾಗಿ ಉಪ್ಪರಿಗೆಯ ಮೇಲೆ ಕುಳಿತಿದ್ದಳು. ಅವಳ ಮನಸ್ಸಿನಲ್ಲಿ ನಾನಾ ಪ್ರಕಾರದ ಅಶುಭ ವಿಚಾರತರಂಗಗಳು ತಾಕಲಾಡತೊಡಗಿದ್ದವು. ಕೋಮಲ ಹೃದಯದ ಅವಳ ಅಂತಃಕರಣವು ದುಃಖಾಗ್ನಿಯಿಂದ ಕಮರತೊಡಗಿತ್ತು. ನೇತ್ರಗಳು ಬಾಷ್ಪಪೂರಿತವಾಗಿದ್ದವು. ವಿಮನಸ್ಕ ದೇವತೆಯೆ! ನಿನ್ನ ಸದಿಚ್ಛೆಯು ಪೂರ್ಣವಾಗಬಹುದೆ? ನಿನ್ನ ದಹ್ಯಮಾನ ಹೃದಯವು ಶಾಂತವಾಗಬಹುದೆ? ಸಾಧ್ವಿಯೆ! ನಿನ್ನ ಸುಖ-ಶಾಂತಿಗಳೇ ಇಡಿ ಭಾರತದ ಸುಖ-ಶಾಂತಿಗಳು. ಸಾಧ್ವೀ! ನೀನು ಸ್ವಾನಂದಪರಿಪೂರ್ಣಳಾಗಬಹುದೆ? ನಿನ್ನ ತಳಮಳಿಸುವ ಮಾತೃಹೃದಯವು ತಂಪು ಒಡೆಯಬಹುದೆ? ಯಾರು ಬಲ್ಲರು? ಭವಿಷ್ಯತ್ಕಾಲೀನ ಅಜ್ಞಾತ ಸ್ಥಿತಿಯನ್ನು ಅದಾರು ಕಂಡವರು?

"ವಿಪುಲೇ, ವಿಷಣ್ಣಮುದ್ರೆಯದೇಕೆ? ಕನ್ಯಕುಬ್ಜದ ಅಭ್ಯುದಯಕಾಲವು ಸಮೀಪಿಸಿರುವದನ್ನು ನೋಡಿ ಆನಂದಮುದ್ರೆಯಿಂದ ನನ್ನ ಮನಸ್ಸನ್ನು ಸಂಭ್ರಮಗೊಳಿಸದೆ, ಹೀಗೆ ವಿಮನಸ್ಕಳಾಗುವದೇಕೆ?"

"ಏನು, ವಿಷಣ್ಣ ಮುದ್ರೆಯೇಕೆನ್ನುವಿರಾ? ವಿಮನಸ್ಕಳಾಗುವದೇಕೆಂದು ಕೇಳುವಿರಾ? ಹೃದಯಮಂದಿರದಲ್ಲಿ ಅಗ್ನಿಯನ್ನಿಕ್ಕಿ, ಮೇಲೆ ಎಣ್ಣೆಯನ್ನೆರಚತೊಡಗಿ, ಭೀಷಣವಾದ ಉರಿಯನ್ನೆಬ್ಬಿಸಿ, ಮತ್ತೆ ದುಃಖವೇಕೆಂದು ಕೇಳುವಿರಾ?"

ಪತಿಯ ಮಾತಿಗೆ ವಿಪುಲಾದೇವಿಯು ಈ ಮೇರೆಗೆ ಉತ್ತರವನ್ನಿತ್ತು ಪ್ರಲಾಪಿಸತೊಡಗಿದ್ದಳು. ಅವಳ ನೇತ್ರಗಳಿಂದ ಗಂಗಾ-ಯಮುನೆಗಳು ಪ್ರವಾಹಗಟ್ಟಿ ಹರಿದು, ಅವಳ ಉರುಪ್ರದೇಶದಲ್ಲಿ ಬೀಳತೊಡಗಿದ್ದವು. ಅವಳ ಅಂತರಂಗದ ಜ್ವಾಲೆಯನ್ನು ಬಾಹ್ಯಜಲವು ಹೇಗೆ ಶಾಂತಗೊಳಿಸುವದು? ಅವಳ ಸುಡುತ್ತಿರುವ ಹೃದಯವು ಉರುಪ್ರದೇಶದಲ್ಲಿ ಬೀಳುವ ದುಃಖಾಶ್ರುಗಳಿಂದ ಶಾಂತವಾಗಬಹುದೆ? ಕಾದ ಪ್ರದೇಶದ ಮೇಲೆ ಅಲ್ಪ ಜ್ವಲವು ಬೀಳುವದರಿಂದ ಮತ್ತಿಷ್ಟು ತಾಪದಾಯಕವಲ್ಲದೆ, ಅದರಿಂದ ಶಾಂತತೆ ದೊರೆಯುವದೇ?

ಪತ್ನಿಯ ಮಾತಿನಿಂದ ಜಯಚಂದ್ರನಿಗೆ ಪರಮಾಶ್ಚರ್ಯವೆನಿಸಿತು. ತಾನು ಉತ್ಸುಕತೆಯಿಂದಲೂ, ಈರ್ಷೆಯಿಂದಲೂ ಪ್ರಾರಂಭಿಸಿದ್ದ ಮಹಾ ಕ್ರತುವಿನಲ್ಲಿ

ಜಯವು ದೊರೆತು, ತನ್ನ ಸ್ಥಿರವಾದ ಅಭ್ಯುದಯವಾಗುವದೆಂಬದನ್ನು ನೆನೆದು ಪ್ರಫುಲ್ಲವದನೆಯಾಗದೆ, ಇವಳು ಹೀಗೇಕೆ ದುಃಖಿತಳಾಗಿರುವಳೆಂಬದು ಅವನಿಗೆ ತಿಳಿಯದಾಯಿತು. ಅವಳಾಡಿದ ಮಾತಿನ ಮರ್ಮವು ಅವನಿಗೆ ಸ್ವಲ್ಪವೂ ತಿಳಿಯ ಲಿಲ್ಲ. ಆಗ ಅವನು ವಿಸ್ಮಿತವಾಣಿಯಿಂದ:—"ಪ್ರಿಯೆ, ನೀನು ಇದೇನಾಡತೊಡಗಿ ರುವೆ? ನಿಷ್ಕಾರಣ ಉದ್ವಿಗ್ನತೆಯೇಕೆ? ಪ್ರಲಾಪವೇಕೆ?"

"ಅಳುವಂತೆ ಮಾಡಿದವರಾದ ನೀವೇ ಅಳುವಿಗೆ ಕಾರಣವೇನೆಂದು ಕೇಳಿದರೆ ನಾನೇನು ಹೇಳಲಿ?" ಎಂದು ನುಡಿದು, ವಿಪುಲಾದೇವಿಯು ಸೀರೆಯ ಸೆರಗಿನಿಂದ ಕಂಬನಿಗಳನ್ನೊರೆಸಿಕೊಳ್ಳುತ್ತ:—"ಈಗ ನೀವು ಯುದ್ಧದ ಸೌರಣೆ ನಡೆಯಿಸಿರುವ ದೇಕೆ? ಯಾರ ಮೇಲೆ ದಂಡೆತ್ತಿ ಹೋಗಬೇಕೆನ್ನುವಿರಿ?"

"ಪ್ರಿಯೆ, ಅರಿಯದವಳಂತೆ ನೀನು ಹೀಗೆ ಬುದ್ಧಿಪೂರ್ವಕ ಕೇಳತೊಡ ಗಿರುವೆಯೇನು?"

"ನನ್ನ ಅಳುವಿನ ಕಾರಣವನ್ನಾದರೂ ನೀವು ಬುದ್ಧಿಪೂರ್ವಕ ಕೇಳತೊಡಗಿ ರುವಿರಿ. ಈ ಪರಿಯ ಹೇವ-ಪಂಥಗಳಿಂದ ಕನ್ಯಕುಬ್ಜರಾಜ್ಯವು ಹೆಚ್ಚಳ ಪಡೆಯು ವದೆ? ನಮ್ಮ ಮನಸ್ಸಿಗೆ ಸಂಭ್ರಮವುಂಟಾಗುವದೆ? ಮಗಳನ್ನು-ವಾತ್ಸಲ್ಯದ ಪುತ್ರಿ ಯಾದ ಸಂಯುಕ್ತೆಯನ್ನು-ವೈಧವ್ಯಪಂಕದಲ್ಲಿ ಕೆಡಹುವದಕ್ಕೆಂದು ಇಷ್ಟು ದೀರ್ಘ ಸಾಹಸ ನಡೆದಿರುವದಲ್ಲವೆ? ಹೀಗಿದ್ದು, ಮತ್ತೆ ಅಳುವದೇಕೆಂದು ಕೇಳುವಿರಲ್ಲವೆ? ಹೊಟ್ಟೆಯ ಕರಳನ್ನು ಕೊಯ್ಯತೊಡಗುವದು ನೋಡಿ ಅಳದೆ, ನಗಬೇಕೇ? ಹೊಟ್ಟೆ ಯನ್ನು ಸುಟ್ಟು ಧಗಧಗಿಸುತ್ತಿರುವ ದುಃಖಾಗ್ನಿಯನ್ನು ಸಹಿಸುವದಾಗದ್ದಕ್ಕೆ ಅಳುತ್ತ ಕುಳಿತುಕೊಂಡಿರುವ ನಾನು ಏನು ನೋಡಿ ನಗಲಿ? ಏತರಿಂದ ಸಂಭ್ರಮಗೊಳ್ಳಲಿ?"

"ವಿಪುಲೆ, ನೀನು ಭ್ರಮಿಷ್ಟಳಿರುವೆ! ಸಂಯುಕ್ತೆಯು ಮಗಳೆಂಬ ಮೋಹ ವನ್ನು ತಳೆದುದರಿಂದಲೆ ನಿನಗೆ ದುಃಖವಾಗುತ್ತಿರುವದು. ಯಾರು ತಾಯಿ-ತಂದೆಗಳ ಮಾತನ್ನುಲ್ಲಂಘಿಸುವರೋ, ಯಾರು ಪಿತೃಧರ್ಮವನ್ನು ಬದಿಗಿರಿಸಿ ದುರಾಚಾರಿ ಗಳಾಗಿ ನಡೆಯುವರೋ, ಯಾರು ಪಿತೃದ್ರೋಹಗೈಯುವದಕ್ಕೆ ಸಿದ್ಧರಾಗುವರೋ ಅಂತಹರಿಗೆ ಮಕ್ಕಳೆಂದು ಏಕೆ ಅನ್ನಬೇಕು? ಅವರ ವಿಷಯದಲ್ಲಿ ಸದಯಾಂತಃಕರಣ ವನ್ನು ತಳೆಯುವದೇಕೆ? ಅವಳು ನನ್ನ ಮನಸ್ಸಿನ ವಿರುದ್ಧವಾಗಿ ಆ ನರಾಧಮ ಪೃಥ್ವಿಯ ಕೊರಳಲ್ಲಿ ಎಂದು ಮಾಲೆ ಹಾಕಿದಳೋ, ಅಂದೇ ವೈರಿಯಾಗಿರುವಳು. ಆ ರಕ್ಕಸಿಯಾದ ಸಂಯುಕ್ತೆಯು ಇದ್ದರೇನು, ಸತ್ತರೇನು? ಪೃಥ್ವಿಯನ್ನು ಯುದ್ಧ ದಲ್ಲಿ ಕೊಲ್ಲಲೇಬೇಕು! ಸಂಯುಕ್ತೆಯು ವೈಧವ್ಯದಲ್ಲಿ ಕೊಳೆಯಲೇಬೇಕು! ಅವಳ ಸೌಭಾಗ್ಯವನ್ನು ನಾಶಮಾಡುವದಕ್ಕಾಗಿಯೇ ಈಗಿನ ಭೀಷಣವಾದ ವ್ಯೂಹವು ರಚಿ

ಸಲ್ಪಡತೊಡಗಿರುವದು. ಪೃಥ್ವಿಯ ಬಿಸಿನೆತ್ತರದಿಂದಲೇ ರುಧಿರಪಿಸಾಸಿಯಾದ ನನ್ನ ಅಂತರಾತ್ಮವು ತೃಪ್ತಿಹೊಂದತಕ್ಕದ್ದಿರುವದು! ನನ್ನ ಆನಂದವೇ ನಿನ್ನ ಆನಂದವಲ್ಲವೆ? ನನ್ನ ಅಭ್ಯುದಯವು ನಿನಗೆ ಸಂತೋಷಕಾರಕವಲ್ಲವೆ? ಪರಮ ಸಾಧ್ವಿಯಾದ ನೀನು ಪತಿಯನ್ನು ಅನುಸರಿಸದೆ ನಡೆಯಬೇಕೇನು? ನೀನು ಸಂಯುಕ್ತೆಯ ವಿಷಯವಾಗಿ ಹಂಬಲಿಸದೆ ನನ್ನಂತೆ ಕಠೋರ ಹೃದಯಿಯಾಗು. ಸಮರಭೂಮಿಯಲ್ಲಿ ಪ್ರಮತ್ತ ಪೃಥ್ವಿಯನ್ನು ಹೊಡೆಯುವೆನು; ಇಲ್ಲವೆ ಮಡಿಯುವೆನು. ಈ ನನ್ನ ನಿಶ್ಚಯದ ವಾಣಿಯು ತ್ರಿಕಾಲಾಬಾಧಿತ ಸತ್ಯವಾಗಿರುವದು!"

"ಸ್ತುತ್ಯವಾದ ದೃಢನಿಶ್ಚಯವಿದು! ನಿಮ್ಮ ನಿಶ್ಚಯವನ್ನು ಕೇಳಿ ಯಾರಿಗಾದರೂ ಆನಂದವಾಗುವಂತಿದೆ!" ಎಂದು ಕುದಿಯುವ ಮನಸ್ಸಿನಿಂದ ವಿಪುಲಾದೇವಿಯು ನುಡಿದು:—"ನನ್ನ ಪ್ರಾರಬ್ಧಯೋಗಕ್ಕೆ ಯಾರೇನು ಮಾಡುವರು! ಇಷ್ಟು ಒಬ್ಬ ಮಗಳು ಸುಖದಿಂದ ಸಂಸಾರಮಾಡುತ್ತಿರುವದನ್ನು ನೋಡಬೇಕೆಂದು ವಿಧಾತನ ಇಚ್ಛೆಯಿಲ್ಲದಿದ್ದರೆ ನನ್ನ ಪ್ರಯತ್ನಕ್ಕೆ ಯಶವಾದರೂ ಹೇಗೆ ದೊರೆಯುವದು?"

ನಿಟ್ಟುಸಿರುಗರೆಯುತ್ತ ವಿಪುಲಾದೇವಿಯಾಡಿದ ಮಾತುಗಳಿಂದ ಜಯಚಂದ್ರನು ರೋಷಗೊಂಡನು. ಕೃತಘ್ನಳಾದ ಮಗಳ ಮೇಲೆ ನಿರರ್ಥಕ ಪ್ರೇಮಗೊಂಡಿರುವಳೆಂದು ಅವನು ಪತ್ನಿಯ ವಿಷಯಕ್ಕೆ ಸಿಟ್ಟಾದನು. ಅಸ್ಥಿವೈರಿಯಾದ ಪೃಥ್ವೀರಾಜನನ್ನು ವರಿಸಿ, ತನ್ನನ್ನು ತಾನೇ ನಾಶಮಾಡಿಕೊಳ್ಳಲೆತ್ನಿಸಿದ ಮಗಳ ಮೇಲೆ ಅನುರಾಗ ತೋರಿಸುವದು ಅನುಚಿತವೆಂದು ಅವನು ಭಾವಿಸಿದ್ದನು. ಅವಳ ಮೇಲೆ ಅಂತಃಕರಣವಿಟ್ಟರೆ ಪೃಥ್ವೀರಾಜನನ್ನು ದಂಡಿಸುವದಾಗುವದಿಲ್ಲವೆಂದು ತಿಳಿದುಕೊಂಡೇ ಅವನು ತನ್ನ ಹೃದಯವನ್ನು ಹಾಗೆ ಕಲ್ಲಿಗಿಂತಲೂ ಕಲ್ಲು ಮಾಡಿದ್ದನು.

"ವಿಪುಲೇ! ನೀನು ಮಗಳ ಮೇಲೆ ಅಷ್ಟೊಂದು ವಾತ್ಸಲ್ಯವುಳ್ಳವಳಿದ್ದರೆ ಈಗಲೇ ಇಲ್ಲಿಂದ ತೆರಳು. ಮಗಳನ್ನು ಕೂಡಿಕೊಂಡು ಸೌಖ್ಯದಿಂದಿರುವದಕ್ಕೆ ನಾನೇನೂ ಬೇಡೆನ್ನುವದಿಲ್ಲ. ನೀಚ ಪೃಥ್ವಿಯನ್ನು ಅವನ ವಂಶಸಹಿತ ನಾಶಮಾಡುವದಕ್ಕೆ ತಕ್ಕ ವ್ಯೂಹವು ರಚಿತವಾಗಿರುವಾಗ, ಇಲ್ಲದ ವ್ಯಾಮೋಹದಿಂದ ಕರ್ತವ್ಯಪರಾಙ್ಮುಖನಾಗಲಾ? ಭವಿಷ್ಯತ್ಕಾಲೀನ ಅಭ್ಯುದಯಕ್ಕೆ ಎರವಾಗಲಾ?"

ವಿಪುಲೆಯು ಈ ಮಾತುಗಳನ್ನು ಕೇಳಿ ಕ್ರೋಧಗೊಂಡಳು; ಕೋಪಾವೇಶದಿಂದ ಉನ್ಮತ್ತಳಾದಳು. ಆಗ ಅವಳು ತ್ವೇಷದಿಂದ:—"ನಿಮಗೆ ವಿನಾಶಕಾಲವೊದಗಿರುವದರಿಂದಲೇ ಇಂತಹ ವಿಪರೀತ ಬುದ್ಧಿ ಹುಟ್ಟಿರುವದು. ಇಚ್ಛಿನಿಯನ್ನು ಪೃಥ್ವೀರಾಜನು ವರಿಸಿದನೆಂಬ ಅಸೂಯೆಯಿಂದ ಭೀಮದೇವನು ನಿಮಗೆ ಸಹಾಯ ಮಾಡುವದಕ್ಕೆ ಸಿದ್ಧನಾಗಿರುವನು. ನೀವಾದರೂ ದಿಲ್ಲಿಯ ರಾಜ್ಯ ದೊರೆಯಲಿಲ್ಲೆಂಬ

ಹೊಟ್ಟೇಕಿಚ್ಚಿನಿಂದ ಚಹ್ವಾಣ ಸಮ್ರಾಟನೊಡನೆ ಕಾದುವದಕ್ಕೆ ಸಜ್ಜಾಗಿರುವಿರಿ; ಹಾಗು ಎಲ್ಲವನ್ನೂ ಬಡಿದು ಬಾಯಿಯಲ್ಲಿ ಹಾಕಿಕೊಳ್ಳಬೇಕೆಂಬ ಉದ್ದೇಶದಿಂದ ಶಹಾ ಬುದ್ದೀನ ಘೋರಿಯು ನಿಮಗೆ ಸಹಾಯ ಮಾಡಲೊಪ್ಪಿರುವನು. ಯಾವ ದುರಾ ಶಯಗಳಿಗೊಳಗಾಗಿ ನೀವು ಈಗ ಈ ಕೋಲಾಹಲವನ್ನೆಬ್ಬಿಸುವರಿರುವರೋ ಅದರಿಂದ ನಿಮಗೆ ಲಾಭವಾಗದೆ, ಹಾನಿಯೊದಗುವದೇ ನಿಶ್ಚಯ. ಇಬ್ಬರ ನ್ಯಾಯ ಮತ್ತೊ ಬ್ಬರಿಗೆ ಆದಾಯವೆಂಬಂತೆ, ನಿಮ್ಮ ದುಷ್ಕೃತಿಯು ಘೋರಿಗೆ ಫಲದಾಯಕವಾಗು ವದು. ಪೃಥ್ವೀರಾಜನು ನಿಮ್ಮ ರಾಜ್ಯವನ್ನು ತೆಗೆದುಕೊಂಡಿರುವನೆ? ಬೊಕ್ಕಸ ವನ್ನು ಹಾಳುಮಾಡಿರುವನೆ? ಮಾಂಡಲಿಕರಾದ ನಿಮ್ಮಿಂದ ಕಾಣಿಕೆಯ ಹಣವನ್ನು ಸಹ ಇತ್ತೀಚೆಗೆ ಕೇಳಿರುವದಿಲ್ಲ. ಅಂತಹ ಮಹಾನುಭಾವನಲ್ಲಿ ಈ ಪರಿಯ ದ್ವೇಷಭಾವನೆ ತಳೆಯಬೇಕಾದರೆ, ನಿಮಗೆ ಏನೋ ಒಂದು ಕೇಡುಗಾಲವೊದಗಿರುವ ದೆಂದು ಏಕೆ ತಿಳಿಯಬಾರದು?"

"ವಿಪುಲೆ, ಸಂಭ್ರಮದ ದಿವಸದಲ್ಲಿ ಅಶುಭ ಮಾತುಗಳನ್ನಾಡಬೇಡ. ಪೃಥ್ವೀ ರಾಜನ ವಧೆಯಾಗಿ, ಆರ್ಯಾವರ್ತದ ಸಾರ್ವಭೌಮನೆನಿಸಿಕೊಳ್ಳುವ ಸುವರ್ಣ ಸಂಧಿಯು ಬೇಗನೆ ಒದಗುವದಿರುವದು. ಇಂತಹ ಸುದಿನಗಳಲ್ಲಿ ಕ್ಷಣಿಕವೂ ಅಲ್ಪವೂ ಆದ ದುಃಖವನ್ನು ಹಚ್ಚಿಕೊಳ್ಳುವರೇ! ಪ್ರಸವ ವೇದನೆಯನ್ನು ಸಹಿಸಿದರೆ ಪುತ್ರೋ ತ್ಸವದ ಆನಂದವು ಹೇಗೆ ಆಗುವದೋ, ಅದರಂತೆಯೇ ಕುಮಾರಿಯಾದ ಸಂಯು ಕ್ತೆಗೆ ವೈಧವ್ಯವೊದಗಿದ ದುಃಖವನ್ನು ಸಹಿಸಿದರೆ, ನೀನು ಆರ್ಯಾವರ್ತದ ಸಾರ್ವ ಭೌಮನ ಸಾಮ್ರಾಜ್ಞಿಯಾಗುವೆ!"

"ಅಹಹಾ! ನಿಮ್ಮ ಮಣ್ಣುಗೂಡುವ ಮನೋರಾಜ್ಯವೆ!" ಎಂದು ವಿಪು ಲೆಯು ಉದ್ಗರಿಸಿದಳು.

———

ಶಹಾಬುದ್ದೀನ ಘೋರಿಯು ಹೇರಳವಾದ ಸೈನದೊಂದಿಗೆ ಗಿಝುನಿಯ ಬಿಟ್ಟು ಹೊರಟಿ ದ್ದನು. ಅವನ ಅಮೋಘವಾದ ಸೈನ್ಯದ ತುಳಿತಕ್ಕೆ ಆರ್ಯಾವರ್ತವು ವಿಧ್ವಂಸ ವಾಗುವದೆಂದು ಸ್ವದೇಶಾಭಿಮಾನಿಗಳಾದ ರಜಪೂತ ದೊರೆಗಳು ಭಯಗೊಂಡಿದ್ದರು. ಜಯಚಂದ್ರ - ಭೀಮದೇವಾದಿ ದೇಶಘಾತಕಿಗಳು ಮಾತ್ರ ಅವನ ಆಗಮನವನ್ನು ಚಾತಕ ಪಕ್ಷಿಯಂತೆ ನಿರೀಕ್ಷಿಸತೊಡಗಿದ್ದರು!

ಅನುಸಂಧಾನ.

ಶತ್ರುಬಲವು ಹಿಂದುಸ್ತಾನದ ಮೇರೆಯಲ್ಲಿ ಕಾಲಿಟ್ಟದ್ದರೂ ಪೃಥ್ವೀರಾಜನಿಗೆ ಅದರ ಪರಿವೆಯೇ ಇದ್ದಿಲ್ಲ. ಅವನು ವಿಷಯಾನಂದದಲ್ಲಿ ನಿಮಗ್ನನಾಗಿದ್ದನು.

ಹೊರಗೆ ನಡೆದ ಕೋಲಾಹಲವು ಸ್ತ್ರೀಲೋಲುಪನಾದ ಅವನ ಕಿವಿಗೆ ಕೇಳುತ್ತಿರಲಿಲ್ಲ ಮಂತ್ರಿ-ಸೇನಾನಾಯಕರ ಉಪದೇಶವು ವಿಷಯಮದದಿಂದ ಉನ್ಮತ್ತನಾದ ಅವನನ್ನು ಎಚ್ಚರಗೊಳಿಸಲು ಸಮರ್ಥವಾಗಿದ್ದಿಲ್ಲ.

ದಿಲ್ಲಿಯ ಮೇಲೆ ಸಾಗಿ ಬರುವದಕ್ಕಾಗಿ ಹೊರಟ ಶಹಾಬುದ್ದೀನನು ಈಗಾಗಲೆ ಹಿಂದುಸ್ತಾನದ ಸೀಮೆಯನ್ನು ಸೇರಿದ ಸಂಗತಿಯನ್ನು ಸಂಯುಕ್ತೆಯೂ ಇಚ್ಛಿನೀ ಕುಮಾರಿಯೂ ಕೇಳಿ ಗಾಬರಿಯಾದರು. ಮುಂದೆ ಭಯಂಕರವಾದ ಗಂಡಾಂತರ ವೊದಗುವಂತಿದ್ದುದನ್ನು ಸಹ ತಮ್ಮ ಪತಿಯು ದುರ್ಲಕ್ಷಿಸುತ್ತಿರುವದನ್ನು ನೋಡಿ, ಅವರಿಗೆ ಅತ್ಯಂತ ಖೇದವೆನಿಸಿತು.

"ಪ್ರಿಯಕರಾ, ನಿಮ್ಮ ಸ್ವಭಾವವು ಇಷ್ಟೇಕೆ ವಿಪರ್ಯಾಸ ಹೊಂದಿತು? ನಿಮ್ಮ ಅಜಾಗ್ರತೆಯಿಂದ ನೀವೂ ನಿಮ್ಮ ರಾಜ್ಯವೂ ನಿರ್ನಾಮವಾಗುವ ಪ್ರಸಂಗವೊದಗಿತು. ರಾಜಕಾರಣದಲ್ಲಿ ನೀವು ಈ ರೀತಿ ಉದಾಸೀನತೆ ತಾಳುವದರಿಂದ ಯಾವ ಬಗೆಯ ಅನರ್ಥವೊದಗುವವೆಂಬದನ್ನು ಕಲ್ಪಿಸಿರುವಿರಾ? ಘೋರಿಯು ಉಪಕಾರಕರ್ತೃಗಳಾದ ನಿಮ್ಮಲ್ಲಿ ಕೃತಜ್ಞತೆಯುಳ್ಳವನಿರುವನೆಂದು ಆಡಿತೋರಿಸಿದ್ದಿರಲ್ಲವೆ? ನೋಡಿರಿ! ಅವನ ಕೃತಜ್ಞತಾಭಾವವು ಹೇಗಿದೆ! ಘೋರಿಯ ಕೃಯು ಹೇಗಿರುವದೆಂಬದನ್ನು ನೀವು ಕೇಳಿ ಅರಿತಿಲ್ಲವೆ? ಧರ್ಮಪ್ರಸಾರ-ರಾಜ್ಯಪ್ರಾಪ್ತಿ ಇವುಗಳಿಗಾಗಿ ಅವನು ಎಂತಹ ಕೃತಿಗಳನ್ನಾದರೂ ಮಾಡುವದಕ್ಕೆ ಹೇಸುವದಿಲ್ಲ. ಸಾಧುಭಾವದ ಕ್ಷತ್ರಿಯರಾದ ನೀವು ಧರ್ಮಕ್ಕೆ ಕಟ್ಟುಬಿದ್ದು ಮೋಸ ಹೋಗುವಿರಿ. ಯಾರನ್ನು ನಂಬಬೇಕು, ಯಾರನ್ನು ನಂಬಬಾರದು ಎಂಬದರ ವಿಚಾರವನ್ನು ನೀವು ಮಾಡುವದೇ ಇಲ್ಲ. ಹೀಗಾಗಿ ಶತ್ರುಗಳ ಕಪಟಪ್ರಯೋಗದಿಂದ ನಿಮ್ಮ ಘಾತವಾಗುವದು. ನೀಚ ಸ್ವಭಾವದ ವೈರಿಗಳಿಗೆ ಕ್ಷಮಾದಾನ ಮಾಡಿ ಆತ್ಮವಂಚಕತನ ಹೊಂದುವದೆಲ್ಲಿಯ ನ್ಯಾಯ? ಇದೆಲ್ಲಿಯ ಧೋರಣ? ಪ್ರಿಯರೇ, ಈಗಲಾದರೂ ಸಿದ್ಧತೆಗೆ ತೊಡಗಿರಿ. ನಿಮ್ಮ ಉದಾಸೀನತೆಯಿಂದ ರಾಜ್ಯಕ್ಕೆ ರಾಜ್ಯವೇ ನಾಶವಾಗುವದೆಂಬದನ್ನು ಲಕ್ಷ್ಯದಲ್ಲಿಡಿರಿ?"

ಶಹಾಬುದ್ದೀನನು ಕೃತಘ್ನನಾಗಿ ತಮ್ಮ ಮೇಲೆ ಸಾಗಿಬಂದುದನ್ನು ನೋಡಿ ಪೃಥ್ವೀರಾಜನು ಸಂತಪ್ತನಾಗಿದ್ದನು. ಅವನಿಗೆ ಕ್ಷಮಾದಾನ ಮಾಡಿದ್ದು ಒಳಿತಾಗಲಿಲ್ಲವೆಂದು ಪಶ್ಚಾತ್ತಾಪಪಡತೊಡಗಿದ್ದನು. ಅವನು ಸಂಯುಕ್ತೆಯಾಡಿದ ಮಾತುಗಳಿಂದ ಪೂರಾ ಎಚ್ಚತ್ತನು. ತನ್ನ ಕ್ಷಾತ್ರತೇಜಸ್ಸನ್ನು ತೋರ್ಪಡಿಸಿ, ಘೋರಿಯ ಮದವನ್ನಿಳಿಸಬೇಕೆಂದು ಅವನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು.

"ಪ್ರಿಯೆ, ನಾನು ಅನುಚಿತ ಕಾರ್ಯ ಮಾಡಿದಂತಾಯಿತು. ಘೋರಿಯ ಮೇಲೆ ದಯೆ ತೋರಿಸದಿದ್ದರೆ ಇಂತಹ ಪ್ರಸಂಗವೇ ಒದಗುತ್ತಿರಲಿಲ್ಲ. ಮಾತು

ಮಿಂಚಿ ಹೋಗಿದೆ; ಈಗ ಚಿಂತಿಸಿದರೆ ಆಗುವದೇನು? ಯುಕ್ತಿಪ್ರಯುಕ್ತಿಗಳಿಂದ ಎಲ್ಲ ಕ್ಷತ್ರಿಯ ಅರಸರನ್ನು ಕೈಯಲ್ಲಿ ತೆಗೆದುಕೊಂಡು ಅವನೊಡನೆ ಸಂಗ್ರಾಮಕ್ಕೆ ಅಣಿಯಾಗಬೇಕು" ಹೀಗೆ ಪೃಥ್ವೀರಾಜನು ನುಡಿಯುತ್ತಿರಲು, ಅವನ ಬೀಗನಾದ ಸಮರಸಿಂಹ ರಾವಳನು ಅಲ್ಲಿಗೆ ಬಂದನು. ಈ ಸಂಕಟ ಸಮಯದಲ್ಲಿ ಚಿತೋಡಾಧಿಪತಿಯ ಆಗಮನದಿಂದ ಅವನಿಗೆ ಮಹದಾನಂದವಾಯಿತು. ಅವನು ಸಮರಸಿಂಹನನ್ನು ಸನ್ಮಾನಿಸಿ ಕುಳ್ಳಿರಿಸಿಕೊಂಡು, ಘೋರಿಯು ದಂಡೆತ್ತಿ ಹೊರಟ ಸಂಗತಿಯನ್ನು ತಿಳಿಸಿದನು.

"ಪೃಥ್ವೀರಾಜರೇ, ನಾನು ಈ ಸಂಗತಿ ಕೇಳಿರುವೆನು. ಗೃಹಭೇದಿಗಳಾದ ಸ್ವಜನರು ಘೋರಿಗೆ ಸಹಾಯಕರಿರುವದರಿಂದ ಜಾಗ್ರತೆಗೊಳ್ಳಬೇಕಾಗಿರುವದು. ನಮ್ಮವರು ಶಹಾಬುದ್ದೀನನಿಗೆ ಸಹಾಯ ಮಾಡದಿದ್ದರೆ, ಅವನಿಗೆ ನಿಮ್ಮ ಮೇಲೆ ದಂಡೆತ್ತಿ ಬರುವದಕ್ಕೆ ಎದೆಯಾಗುತ್ತಿದ್ದಿಲ್ಲ. ಕ್ಷುದ್ರತರವಾದ ಸ್ವಾರ್ಥಕ್ಕಾಗಿಯೂ, ಪರೋತ್ಕರ್ಷೆಯನ್ನು ನೋಡಿ ಅಸೂಯೆಗೊಳಗಾಗಿಯೂ, ಒಳಜಗಳದ ಮೂಲಕವಾಗಿಯೂ ನೆರೆಮನೆಯ ಶತ್ರುವನ್ನು ತಂದು, ಸ್ವದೇಶದ ನಾಶಕ್ಕೆಳೆಸಿದ ಜಯಚಂದ್ರಾದಿ ಅಧಮ ಕ್ಷತ್ರಿಯರಿಗೆ ಏನೆನಬೇಕೋ ತಿಳಿಯದಾಗಿದೆ! ನೀವು ಆದಷ್ಟು ಬೇಗನೆ ಸೈನ್ಯಸಿದ್ಧತೆಯಲ್ಲಿ ತೊಡಗಿರಿ. ನಿಮ್ಮ ಸ್ನೇಹಿತರೂ ಮಾಂಡಲಿಕರೂ ಆದ ಎಲ್ಲ ಕ್ಷತ್ರಿಯ ಅರಸರಿಗೆ ಸಂಗ್ರಾಮಕ್ಕೆ ಬರಲು ನಿರೂಪ ಕಳಿಸಿರಿ."

ಸಮರಸಿಂಹನು ಹೀಗೆ ನುಡಿದ ಕೂಡಲೆ ಪೃಥ್ವೀರಾಜನು ವಿಚಾರಮಗ್ನನಾದನು. ಕೆಚ್ಚೆದೆಯ ವೀರನಾದ ಅವನು ಘೋರಿಗೆ ತಿಲಾಂಶವಾದರೂ ಬೆದರಿದ್ದಿಲ್ಲ; ಆದರೆ ಸ್ವಕೀಯರು ಅಂತಃಕಲಹವನ್ನೆಬ್ಬಿಸಿ, ಆತ್ಮಘಾತ ಮಾಡಿಕೊಳ್ಳುವ ಯಾಪನಿ ಉಪಸ್ಥಿತ ಮಾಡಿದ್ದರಿಂದ, ಅವನು ಬಹು ಪರಿಯಿಂದ ಮಿಡುಕಹತ್ತಿದ್ದನು. ಆಗ ಅವನ ಮನಸ್ಸಿನಲ್ಲಿ ಒಂದು ವಿಚಾರ ಹುಟ್ಟಿತು. ಕೂಡಲೆ ಅವನು ಸಮರಸಿಂಹನನ್ನು ಕುರಿತು ಕುತೂಹಲದಿಂದ:—"ಸಮರಸಿಂಹಜೀ, ಒಬ್ಬ ಪ್ರತಿನಿಧಿಯನ್ನು ಜಯಚಂದ್ರರಾಜರ ಬಳಿಗೆ ಕಳಿಸಿ ಅನುಸಂಧಾನ ಮಾಡಿಕೊಂಡರೆ ಒಳಿತಾಗುವದಿಲ್ಲವೆ? ಅವರ ಹೇಳಿಕೆಯಂತೆ ವರ್ತಿಸಲಿಕ್ಕೆ ನಾನು ಸಿದ್ಧನಿರುವೆನು. ಒಳಜಗಳದ ಉರಿಯಿಂದ ಪ್ರಜಾಕ್ಷಯಗೊಳಿಸುವದು ನನ್ನ ಮನಸ್ಸಿಲ್ಲ. ಕಾರಣ ನಾವು ಒಂದಾದರೆ ಘೋರಿಯು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋಗುವದೇ ನಿಜ."

"ಮತ್ಸರಗ್ರಸ್ತನಾದ ಜಯಚಂದ್ರನು ಒಡಂಬಡಿಕೆಗೆ ಒಪ್ಪಲಾರನೆಂದು ನನಗೆ ನಂಬಿಗೆಯಾಗಿರುವದು. ಪರಕೀಯನಾದ ಶಹಾಬುದ್ದೀನನಿಗಿಂತಲೂ, ಜಯಚಂದ್ರನಲ್ಲಿ ಸೇಡು ತೀರಿಸಿಕೊಳ್ಳುವ ಭಾವನೆಯು ಅತ್ಯಂತ ಜಾಗ್ರತವಿರುವದರಿಂದ, ಅವನು

ಒಪ್ಪಂದಕ್ಕೆ ಸಮ್ಮತಿಸುವನೆ? ವಸ್ತುಸ್ಥಿತಿಯು ಹೀಗಿದ್ದರೂ ಪ್ರಯತ್ನಿಸಿ ನೋಡು ವದು ನಮ್ಮ ಕರ್ತವ್ಯ. ಪ್ರಯತ್ನಕ್ಕೆ ಫಲವನ್ನು ಕೊಡುವವನು ಪರಮಾತ್ಮನು" ಎಂದು ಸಮರಸಿಂಹನು ನುಡಿಯಲು, ಸಂಯುಕ್ತೆಯು:—

"ನನ್ನ ತಂದೆಯುವರು ಕ್ಷುದ್ರವಾದ ಮನೋವೃತ್ತಿಯುವರಿರುವದೇನೋ ನಿಜ; ಆದರೆ ಮಹಾರಾಜರು ವಿನಯದಿಂದ ಪ್ರಾರ್ಥಿಸಿದರೆ, ಇವರ ವಿನಂತಿಯನ್ನು ತಿರಸ್ಕರಿ ಸುವಂತಹ ದಡ್ಡರು ನನ್ನ ತಂದೆಯುವರಲ್ಲವೆಂಬ ವಿಶ್ವಾಸವು ನನಗಿರುವದು. ಕೃತಾ ಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವದಕ್ಕೆ ಅಡ್ಡಿಯೇನು?"

"ಪ್ರಿಯೆ, ಒಮ್ಮೆಯೇಕೆ? ಸಹಸ್ರಬಾರಿ ವಿಜ್ಞಾಪನೆ ಮಾಡಿಕೊಳ್ಳುವೆನು. ಅತ್ಯಂತ ಸಾಹಸದಿಂದ ಸಾಧ್ಯವಾಗತಕ್ಕ ಕಾರ್ಯವು ಸಾಮೋಪಾಯದಿಂದ ಸುಸಾಧ್ಯ ವಾಗುವಂತಿದ್ದರೆ, ಅಂತಹ ಸುಸಂಧಿಯನ್ನು ನಾನು ವ್ಯರ್ಥ ಹೋಗಗೊಡುವಂತಹ ಮೂರ್ಖನಿರುವೆನೆ? ಬಟೆಂಡಾಗಡದ ಅಮರಸಿಂಹನನ್ನು ಈಗಲೆ ಕನೋಜಕ್ಕೆ ಕಳಿಸು ವೆನು" ಎಂದು ಪೃಥ್ವೀರಾಜನು ಅಂದನು.

"ಅಮರಸಿಂಹರೇ ಈ ಕಾರ್ಯವನ್ನೀಡೇರಿಸುವದಕ್ಕೆ ತಕ್ಕವರು. ಮಹತ್ವದ ಕೆಲಸಗಳಿಗಾಗಿ ಕರ್ತವ್ಯಕುಶಲ ಧೂರ್ತರನ್ನೇ ನಿಯಮಿಸತಕ್ಕದ್ದು." ಎಂದು ಸಂಯುಕ್ತೆಯು ನುಡಿದು, ಆತುರದಿಂದ:—"ಅಮರಸಿಂಹರು ಬಂದರೆ?"

"ಓಹೋ! ನಿನ್ನೆಯೇ ಬಂದಿರುವರು."

"ಹೀಗಿದ್ದರೆ ಚಿತ್ರರೇಖೆಯ ಕುಶಲವಾರ್ತೆಯನ್ನರುಹುವದಕ್ಕಾಗಿ ಅವರು ನನಗೆ ಇದುವರೆಗೆ ಭೆಟ್ಟಿಯಾಗದಿರಲೇನು ಕಾರಣ?"

"ಬಂದಾಗಿನಿಂದ ಅವರಿಗೆ ಅನುವೇ ಇಲ್ಲ. ಸೈನ್ಯವನ್ನು ಸುವ್ಯವಸ್ಥಿತ ಪಡಿ ಸುವ ಕಾರ್ಯದಲ್ಲಿ ಚಾಮುಂಡರಾಯರಿಗೆ ನೆರವಾಗುವದಕ್ಕೆಂದು ಅವರನ್ನು ನಿಯಮಿಸಿರುವೆನು" ಎಂದು ನುಡಿದು, ಪೃಥ್ವೀರಾಜನು:—"ಚಿತ್ರರೇಖೆಯು ತನ್ನ ಕ್ಷೇಮವಾರ್ತೆಯನ್ನರುಹುವದಕ್ಕಾಗಿ ಅಮರಸಿಂಹರಿಗೆ ತಿಳಿಸಿದ್ದಳಂತೆ. ಅವರು ನನ್ನೆದುರಿನಲ್ಲಿ ನಿನ್ನೆಯೇ ಹೇಳಿದರು; ಆದರೆ ಕಾರ್ಯ ಬಾಹುಲ್ಯದಲ್ಲಿ ವಿಸ್ಮೃತಿಯಾಗಿ ನಾನು ಈ ವಿಷಯವನ್ನು ನಿನಗೆ ಹೇಳುವದುಳಿಯಿತು."

"ಯುದ್ಧಪ್ರಸಂಗವೊದಗಿದಾಗ ಚಿತ್ರರೇಖೆಯು ಬಟೆಂಡಾಗಡದಲ್ಲಿರುವದು ಘಾತುಕವೆಂದು ತೋರತೊಡಗಿರುವದು. ಯಾಕಂದರೆ, ಘೋರಿಯು ಅವಳ ಪ್ರಾಪ್ತಿಗಾಗಿ ಸಾಹಸಮಾಡದೆ ಇರನು" ಎಂದು ಸಂಯುಕ್ತೆ ನುಡಿದ ಕೂಡಲೆ, ಪೃಥ್ವೀರಾಜನು:—"ಅವಳನ್ನು ಇಲ್ಲಿಗೇ ಕರೆಸುವ ವ್ಯವಸ್ಥೆ ಮಾಡಿದರಾಯಿತು."

ಅಮರಸಿಂಹ ಪರಮಾರನು ಪೃಥ್ವೀರಾಜನ ಪತ್ರವನ್ನು ತೆಗೆದುಕೊಂಡು ಕನೋಜನಕ್ಕೆ ಸಂಧಾನಕ್ಕಾಗಿ ಬಂದನು. ಅಲ್ಲಿ ಜಯಚಂದ್ರನ ಯುದ್ಧದ ಸಿದ್ಧತೆಯು

ಒಳ್ಳೆಯ ಭರದಿಂದ ನಡೆದಿತ್ತು. ಅವನು ಶಹಾಬುದ್ದೀನನ ಸೈನ್ಯವನ್ನು ಕೂಡುವದಕ್ಕಾಗಿ ಮೂರನೆಯ ದಿನವೇ ಹೊರಡುವವನಿದ್ದುದರಿಂದ, ಅವಿಶ್ರಾಂತ ಕಾರ್ಯಮಾಡುವದರಲ್ಲಿ ನಿಮಗ್ನನಾಗಿದ್ದನು. ಆಗ ಅಮರಸಿಂಹನು ಪೃಥ್ವೀರಾಜನ ಪತ್ರವನ್ನು ಅವನ ಸ್ವಾಧೀನಪಡಿಸಿದನು. ಜಯಚಂದ್ರನು ಆ ಪತ್ರವನ್ನೋದಿ ಸಂತಪ್ತನಾಗಿ, ಆದನ್ನು ಹರಿದು ಚಲ್ಲಿ:—"ನಿಮ್ಮ ಸಾರ್ವಭೌಮನಿಗೆ ಇಷ್ಟರಲ್ಲೇ ಬುದ್ಧಿ ಬಂದಿತೇ?"

ಕ್ರುದ್ಧ ಜಯಚಂದ್ರನು ಹೀಗೆ ನುಡಿಯಲು, ಅಮರಸಿಂಹನು ವಿನಯದಿಂದ:-

"ಮಹಾರಾಜರೇ!"

"ನಾನೆಲ್ಲಿಯ ಮಹಾರಾಜ? ನಾನು ನಿಮ್ಮ ಸಾರ್ವಭೌಮನ ಮಾಂಡಲಿಕನಲ್ಲವೆ?"

"ಮಹಾರಾಜರೆ! ಸಿಟ್ಟಿನ ಭರದಲ್ಲಿ ಮನಬಂದಂತೆ ನಡೆಯಬೇಡಿರಿ. ಅಂತಃ ಕಲಹವು ಉಭಯತರ ನಾಶಕ್ಕೂ ಕಾರಣವೆಂಬದನ್ನು ನಾನು ನಿಮಗೆ ಹೇಳಬೇಕಾಗಿಲ್ಲ. ನೀವು ನಮ್ಮ ಮಹಾರಾಜರಿಗೆ ಮಾವಂದಿರಾಗಿರುವಿರಿ. ಹಿರಿಯರಾದ ನೀವು ಚಿಕ್ಕವರ ಅಪರಾಧವನ್ನು ಕ್ಷಮಿಸದಿದ್ದರೆ ನಡೆಯುವದೆ? ಕೃತಾಪರಾಧವನ್ನು ಕ್ಷಮಿಸುವದಕ್ಕಾಗಿ ಅವರು ತಮ್ಮ ಪತ್ರದಲ್ಲಿ ವಿನಂತಿ ಮಾಡಿಕೊಂಡಿರುವರು."

"ಅಮರಸಿಂಹ, ನಿನ್ನ ಒಡೆಯನಿಗೆ ಪರಾಕ್ರಮದ ಮದವು ಬಹಳವಾಗಿರುವದು. ಅವನ ಕೊಬ್ಬನ್ನು ಸಮರಾಂಗಣದಲ್ಲಿ ವಿಧ್ವಂಸ ಮಾಡಿದ ಹೊರತು ಗತ್ಯಂತರವಿಲ್ಲ. ಆ ನೀಚನು ಕಪಟದಿಂದ ನನ್ನ ಕುಮಾರಿಯನ್ನು ಒಯ್ದಿರುವನು. ಇಂತಹ ಕುಲಾಂಗಾರನೊಡನೆ ಅನುಸಂಧಾನವೆ? ಆಗದಾಗದು! ಅವನ ಪ್ರಾರ್ಥನೆಗೆ ಯೋಗ್ಯ ಉತ್ತರವನ್ನು ಸಂಗ್ರಾಮದಲ್ಲಿಯೇ ಕೊಡುವೆನು."

"ಜಯಚಂದ್ರರಾಜರೇ, ನಿಮ್ಮ ಚಂಡಿತನದ ಪರಿಣಾಮವೇನಾಗುವದೆಂಬದನ್ನು ನೀವು ನಿರ್ಮಲ ಮನಸ್ಸಿನಿಂದ ಯೋಚಿಸಿ ನೋಡಿರಿ. ಪೃಥ್ವೀರಾಜರಿಗೆ ಕೇಡು ಬಗೆಯುವದರಿಂದ ಬುದ್ಧಿಪೂರ್ವಕ ಗಂಡಾಂತರ ತಂದುಕೊಂಡಂತಾಗುವದಿಲ್ಲವೆ? ನಿಮ್ಮ ಜಾಮಾತರ ಹಿತಚಿಂತನೆಯನ್ನು ನೀವು ಮಾಡುವದಿಲ್ಲವೆ? ಮಗಳ ಸೌಭಾಗ್ಯದ ಕಡೆಗೆ ನೋಡುವದಿಲ್ಲವೆ? ರಣದಲ್ಲಿ ಜಯಾಪಜಯಗಳು ದೈವಾಧೀನಗಳಾಗಿರುವವು. ನಿಮ್ಮಿಬ್ಬರಲ್ಲಿ ಯಾರು ಸೋತರೂ ಯಾರು ಗೆದ್ದರೂ ದುಷ್ಪರಿಣಾಮವೇ ಘಟಿಸುವದು. ಒಳಜಗಳದಿಂದ ಶಹಾಬುದ್ದೀನನಿಗೆ ಲಾಭ ಮಾಡಿಕೊಡುವದರಲ್ಲಿ ಯಾವ ಪುರುಷಾರ್ಥವಿರುವದು? ಮಹಾರಾಜರೇ, ಯುದ್ಧದ ಹವ್ಯಾಸ ಬಿಟ್ಟುಬಿಡಿರಿ. ಹಾಗೆ ಮಾಡುವದರಿಂದ ಉಭಯತರದೂ ಕಲ್ಯಾಣವಾಗುವದು."

"ಅಮರಸಿಂಹ, ನಾನು ಸಂಯುಕ್ತೆಯನ್ನು ಮಗಳೆಂದೇ ತಿಳಿದಿಲ್ಲ. ಹೀಗಿದ್ದ ಮೇಲೆ ಆ ಕುಲಾಂಗಾರ ಪೃಥ್ವಿಯು ಹೇಗೆ ಅಳಿಯನಾಗುವನು? ತಂದೆಯ ಆಜ್ಞೆ

ಮೀರಿ ನಡೆಯುವ ಮಗಳು-ಮಗಳೆ? ರಾಜ್ಯಮದದಿಂದ ಗುರು-ಹಿರಿಯರ ಮಾನ ಖಂಡನ ಮಾಡುವವನ ಸುಖ-ದುಃಖದ ಕಡೆಗೆ ನಾವೇಕೆ ಲಕ್ಷ್ಯಗೊಡಬೇಕು? ಪೃಥ್ವಿಗೆ ರಾಜ್ಯದ ಮದವು ಬಹಳವಾಗಿರುವದು; ಶೌರ್ಯದ ಹೆಮ್ಮೆಯು ಅಪಾರ ವಾಗಿರುವದು. ಅವನ ಅಹಂಕಾರವನ್ನು ನಾಶಮಾಡದಿದ್ದರೆ ನಮ್ಮ ಬಾಳು ಒಳಿತಾ ಗುವದೆ? ಮೋಸದಿಂದ ನನ್ನ ವಾತ್ಸಲ್ಯದ ಪುತ್ರಿಯಾದ ಸಂಯುಕ್ತೆಯನ್ನು ಕದ್ದೊಯ್ದು ಅವಳನ್ನು ವರಿಸಿರುವನು. ಇದರ ಸೇಡು ತೀರಿಸಿಕೊಳ್ಳದಿದ್ದರೆ ನನಗೆ ಕ್ಷತ್ರಿಯನೆಂದು ಅದಾರು ಅನ್ನಬೇಕು? ನಾನು ನನ್ನ ಸ್ವಾರ್ಥಕ್ಕಾಗಿ ಘೋರಿಯನ್ನು ಬರಮಾಡಿಕೊಂಡಿರುವೆನು. ದಿಲ್ಲಿಯ ಸಾಮ್ರಾಜ್ಯದ ಆಧಿಪತ್ಯಲಾಲಸೆಯು ನನ್ನಲ್ಲಿ ಬಹಳವಾಗಿರುವದು. ರಾಜ್ಯಪ್ರಾಪ್ತಿ ಮಾಡಿಕೊಂಡು ಸಮ್ರಾಟನೆಂದೆನಿಸಿಕೊಳ್ಳಬೇಕಾ ದರೆ, ಮಗಳಿಗೆ ವೈಧವ್ಯಪ್ರಾಪ್ತವಾದಗುವದೆಂದು ಯೋಚಿಸುವದು ಯೋಗ್ಯವೆನಿಸುವದೆ?"

ಜಯಚಂದ್ರನ ಮಾತುಗಳನ್ನು ಕೇಳಿ ಅಮರಸಿಂಹನಿಗೆ ಸಖೇದಾಶ್ಚರ್ಯವೆನಿ ಸಿತು. ಆಸುರೀ ರಾಜ್ಯತೃಷ್ಣೆಗೊಳಗಾಗಿ ನೀಚತನದಿಂದ ದೇಶದ್ರೋಹ ಮಾಡಲೆತ್ನಿ ಸಿದ್ದನ್ನು ನೋಡಿ ಅವನು ಬಹು ಪರಿಯಾಗಿ ಕಳವಳಪಟ್ಟನು. ಆಗ ಅವನು ಸಂತಪ್ತ ನಾಗಿದ್ದರೂ ಅದನ್ನು ಹೊರಗೆ ತೋರಗೊಡದೆ, ವಿನಯದಿಂದಲೂ ಮಾರ್ಮಿಕ ತನದಿಂದಲೂ:—

"ಮಹಾರಾಜರೇ, ನಿಮ್ಮ ಈ ಆಕಾಂಕ್ಷೆಯು ಅತ್ಯಂತ ಘಾತುಕವಿರುವದು. ನೀವು ಶಹಾಬುದ್ದೀನನನ್ನು ನಂಬಿರುವಿರಿ; ಅಂತೆಯೇ ಇಂತಹ ಮಾತುಗಳು ನಿಮ್ಮ ಬಾಯಿಂದ ಬರುತ್ತವೆ. ಕೇವಲ ರಾಜ್ಯಲೋಭದಿಂದ ಘೋರಿಯು ನಿಮಗೆ ಸಹಾಯ ಮಾಡುವದಕ್ಕುಪಕ್ರಮಿಸಿರುವನಲ್ಲದೆ, ಅವನು ನಿಸ್ಪೃಹವೃತ್ತಿಯಿಂದಲೂ ಫಲಾಶೆ ರಹಿತನಾಗಿಯೂ ಇರುವನೆಂದು ಗ್ರಹಿಸುವದು ದೊಡ್ಡ ತಪ್ಪಾಗಿರುವದು. ಜೀವದಾನ ಕೊಟ್ಟು ಗೌರವಿಸಿದ ಪೃಥ್ವೀರಾಜರ ಮೇಲೆ ತಿರುಗಿಬಿದ್ದವನಾದ ಘೋರಿಯು, ನಿಮ್ಮ ಮೇಲೆ ತಿರುಗಿ ಬೀಳಲಿಕ್ಕಿಲ್ಲವೆಂದು ಯಾರು ಹೇಳಬೇಕು? ಸಂಗ್ರಾಮದಲ್ಲಿ ನೀವು ಜಯಶಾಲಿಗಳಾದರೂ ದಿಲ್ಲಿಯ ಸಾಮ್ರಾಜ್ಯವು ನಿಮಗೆ ದಕ್ಕುವದೆಂದು ಮಾತ್ರ ತಿಳಿಯಬೇಡಿರಿ."

"ಅಮರಸಿಂಹ, ನನಗೆ ಎಲ್ಲವೂ ತಿಳಿಯುತ್ತದೆ. ನೀನು ಹೆಚ್ಚಾಗಿ ಹೇಳ ಬೇಕಾಗಿಲ್ಲ. ನೀನು ನಮ್ಮ ಸುಖ-ದುಃಖಗಳ ಬಗ್ಗೆ ಚಿಂತೆ ಮಾಡಬೇಡ. ನಿನ್ನ ರಾಜನಿಗೆ ಇಷ್ಟೇ ತಿಳಿಸು; ರಣದೇವತೆಯ ಸಮ್ಮುಖದಲ್ಲೇ ಸಂಧಿಕಾರ್ಯ ಮಾಡ ಬಹುದೆಂದು! ಪೃಥ್ವಿಯ ಶಿರವನ್ನು ಕನ್ಯಕುಬ್ಜದ ರಾಜ್ಯದಲ್ಲೆಲ್ಲ ಮೆರೆಯಿಸದಿದ್ದರೆ ನಾನು ಜಯಚಂದ್ರನೇ ಅಲ್ಲ!"

ಅನುಸಂಧಾನವು ವ್ಯರ್ಥವಾದದ್ದರಿಂದ ಅಮರಸಿಂಹನಿಗೆ ಬಹಳೇ ವಿಷಾದವಾಯಿತು. ಆಗ ಅವನು ಜಯಚಂದ್ರನ ಮೇಲೆ ತ್ವೇಷಗೊಂಡು:—"ಜಯಚಂದ್ರ ಮಹಾರಾಜರೆ, ನಿಮ್ಮಲ್ಲಿ ಇಂತಹ ದುರ್ಬುದ್ಧಿ ಹುಟ್ಟಿದ್ದನ್ನು ನೋಡಿ, ನಿಮಗೆ ವಿನಾಶಕಾಲ ಸಮೀಪಿಸಿರುವದೆಂದೇ ಅನ್ನಬೇಕಾಗಿರುವದು. ನಿಮ್ಮ ಹೇಳಿಕೆಯಂತೆ ನಡೆಯುವದಕ್ಕೆ ಸಾರ್ವಭೌಮರು ಸಿದ್ಧರಿರುವಾಗ, ಅವರ ವಿನಂತಿಯನ್ನು ತಿರಸ್ಕರಿಸಿ, ಸಮರಕ್ಕೆ ಸಿದ್ಧರಾದಿರಲ್ಲವೆ? ಅಂತೂ ಗೃಹಕಲಹದ ಬೇಗೆ ಹೊತ್ತಿಸಿ, ರಾಜ್ಯವನ್ನು ಹಾಳು ಮಾಡುವದಕ್ಕೆ ಸಿದ್ಧರಾದಿರಿ!" ಎಂದು ಅಮರಸಿಂಹನು ನುಡಿದು, ಅಲ್ಲಿಂದ ಹೊರಟು ಹೋದನು!

———

ಸಂಧ್ಯಾಸಮಯ. ಭಾಸ್ಕರನು ಅಧ್ವಶ್ರಮ ಪರಿಹಾರಕ್ಕಾಗಿ ಪಶ್ಚಿಮ ಶರಧಿಯಲ್ಲಿ ದುಮುಕಬೇಕೆಂದಿದ್ದನು. ಪ್ರಿಯಕರನ ಆಗಮನ ಸಂಭ್ರಮದಿಂದ ಪಶ್ಚಿಮಾಂಗನೆಯ ಮುಖವು ಆರಕ್ತತೆ ಹೊಂದಿತ್ತು. ಕಡು ಬಿಸಿಲಿನ ತಾಪದಿಂದ ಬಸವಳಿದ ಪಕ್ಷಿಗಣವು ಶೀತಲವಾಯುವಿನ ಮಂದಲಹರಿಯಿಂದ ಆನಂದಮಯವಾಗಿ ಕಿಲಿಕಿಲಾಟ ಧ್ವನಿಗೈಯುತ್ತ ನಭಪ್ರಾಂಗಣದಲ್ಲಿ ಉಡ್ಡಾಣ ಮಾಡತೊಡಗಿತ್ತು; ಆದರೆ ಸ್ಥಾನೇಶ್ವರದ ರಣಭೂಮಿಯಲ್ಲಿ ಬೀಡುಬಿಟ್ಟಿದ್ದ ಸೇನಾಸಮೂಹಕ್ಕೆ ಸೃಷ್ಟಿಯ ಸಂಧ್ಯಾ ಸೌಂದರ್ಯದ ಕಡೆಗೆ ಲಕ್ಷ್ಯವೆಲ್ಲಿ?

ಸ್ಥಾನೇಶ್ವರದ ರಣದಲ್ಲಿ

ಯವನ ಸೈನ್ಯದ ದಕ್ಷಿಣಭಾಗದಲ್ಲಿ ಜಯಚಂದ್ರನ ಸೈನ್ಯವು ತಳವೂರಿತ್ತು. ಸಮ್ಮುಖದಲ್ಲಿ ಪೃಥ್ವೀರಾಜ, ಸಮರಸಿಂಹ, ಅಮರಸಿಂಹ, ಜೈತಸಿಂಹ ಮೊದಲಾದ ಧರ್ಮಾಭಿಮಾನಿಗಳೂ ದೇಶಾಭಿಮಾನಿಗಳೂ ಆದ ಅರಸರ ಹಾಗು ಸಣ್ಣದೊಡ್ಡ ಮಾಂಡಲಿಕರ ಮತ್ತು ಸರದಾರರ ಸೈನ್ಯಗಳು ಬೀಡುಬಿಟ್ಟಿದ್ದವು. ಜಯಚಂದ್ರನು ತನ್ನ ಡೇರೆಯನ್ನು ಬುದ್ಧಿಪೂರ್ವಕ ಎತ್ತರದ ಸ್ಥಳದಲ್ಲಿ ಹೊಡೆಸಿದ್ದನು. ಅವನ ಪೀತವರ್ಣದ ಧ್ವಜವು ನಿರ್ಲಜ್ಜೆಯಿಂದ ಅಲ್ಲಾಡತೊಡಗಿತ್ತು. ಭಾರತದ ಭಾವೀ ಸಂತತಿಯ ಸ್ವಾತಂತ್ರ್ಯ ರವಿಯು ಕುಲಾಂಗಾರನಾದ ಜಯಚಂದ್ರನಿಂದ ಅಸ್ತಂಗತನಾಗುವ ಸಮಯವು ಸಂಘಟಿಸಿದ್ದನ್ನು ನೋಡಿ, ದಿವಾಕರನ ಮುಖವು ಸಂತಾಪಾತಿರೇಕದಿಂದ ಆರಕ್ತತೆ ಹೊಂದಿತ್ತು. ಅವನು ಆ ದೇಶದ್ರೋಹಿಗಳ ಮುಖವನ್ನು ನೋಡುವದಕ್ಕೆ ಹೇಸಿಕೊಂಡು 'ಧುಡುಂ' ಎಂದು ಪಶ್ಚಿಮಾಂಬುಧಿಯಲ್ಲಿ ದುಮುಕಿದನು.

ಅನುಸಂಧಾನದ ಪ್ರಯೋಜನವು ತಿಲಾಂಶವಾದರೂ ಆಗದೆ ಯುದ್ಧಪ್ರಸಂಗ ಪೊದಗಿದ್ದರಿಂದ, ಪೃಥ್ವೀರಾಜನು ತನ್ನ ಸ್ನೇಹಿತರೂ ಮಾಂಡಲಿಕರೂ ಆದ ಅರಸ ರನ್ನೂ ಸರದಾರರನ್ನೂ ಸಹಾಯಕ್ಕೆ ಕರೆದನು. ಭಾರತದ ಸ್ವಾತಂತ್ರ್ಯವನ್ನು ಕಾ ಸುವದಕ್ಕಾಗಿ ಒಂದನೂರಾಐವತ್ತು ಮಂದಿ ಹಿಂದುರಾಜರು ಅವನಿಗೆ ನೆರವಾದರು. ಅವನು ತನ್ನ ಅಮೋಘವಾದ ಬಲದೊಂದಿಗೆ ಸ್ಥಾನೇಶ್ವರದ ಬಳಿಯ ಯುದ್ಧಭೂಮಿ ಯಲ್ಲಿ ಬೀಡುಬಿಟ್ಟನು.

ಶಹಾಬುದ್ದೀನ ಘೋರಿಯ ಮನೋಗತವು ಪೃಥ್ವೀರಾಜನಿಗೆ ಗೊತ್ತಿತ್ತು. ಭಾರತದಲ್ಲಿ ಯವನ ರಾಜಸತ್ತೆ ಪ್ರಸ್ಥಾಪಿಸಬೇಕೆನ್ನುವ ಘೋರಿಯ ಸಾಹಸವನ್ನು ವ್ಯರ್ಥಮಾಡುವದಕ್ಕಾಗಿ ಅವನು ಟೊಂಕಕಟ್ಟಿದ್ದರೂ, ತನ್ನ ಪಕ್ಷಕ್ಕೇ ಜಯವುಂಟಾಗಿ, ಮನಸ್ಸಿನಂತೆ ಕಾರ್ಯವಾಗುವದೆಂಬ ವಿಶ್ವಾಸ ಮಾತ್ರ ಅವನಿಗಿರಲಿಲ್ಲ. ಜಯಚಂದ್ರ-ಭೀಮದೇವಾದಿ ಪ್ರಬಲ ಕ್ಷತ್ರಿಯ ಅರಸರು ಘೋರಿಯ ಪಕ್ಷ ವಹಿಸಿದ್ದರಿಂದ ಪ್ರಸಂಗ ವಶಾತ್ ತನ್ನ ಪಕ್ಷಕ್ಕೆ ಅಪಜಯವೊದಗಿದರೆ ಪರಿಣಾಮವು ಭಯಂಕರವಾಗುವದೆಂಬ ದನ್ನು ಅವನು ಅರಿತಿದ್ದನು. ಭವಿಷ್ಯತ್ಕಾಲೀನ ಅನರ್ಥವನ್ನು ತಪ್ಪಿಸಬೇಕಾದರೆ ಹಿಂದುರಾಜರೆಲ್ಲರೂ ಐಕ್ಯದಿಂದ ಹೋರಾಡಬೇಕಾಗುವದೆಂದು ಅವನು ತಿಳಿದಿದ್ದನು.

ಮಧ್ಯರಾತ್ರಿಯ ಸಮಯ. ಸ್ಥಾನೇಶ್ವರದ ರಣಭೂಮಿಯೊಳಗಿನ ಎಲ್ಲ ಪಾಳ್ಯ ಗಳಲ್ಲಿಯ ಸೈನಿಕರು ನಿದ್ರಾವಶರಾಗಿದ್ದರು. ಶಿಬಿರಗಳ ಕಾವಲುಗಾರರು ಮಾತ್ರ ಒಳ್ಳೆಯ ಜಾಗ್ರತೆಯಿಂದ ಕಾವಲಿನ ಕೆಲಸ ಮಾಡುತಲಿದ್ದರು. ಆಗ ಇಬ್ಬರು ಅಶ್ವಾರೋಹಿಗಳಾದ ತರುಣರು ಜಯಚಂದ್ರನ ಶಿಬಿರದ ಕಡೆಗೆ ವೇಗದಿಂದ ಸಾಗಿ ದ್ದರು. ಅವರ ಅಂಗರಕ್ಷಕರಾದರೂ ಅವರನ್ನು ಹಿಂಬಾಲಿಸಿ ನಡೆದಿದ್ದರು. ಕೆಲವು ಹೊತ್ತಿನಲ್ಲಿ ಅವರು ಜಯಚಂದ್ರನ ನಿವಾಸದ ಬಳಿಗೆ ಬಂದರು. ಆಗ ಕಾವಲು ಗಾರನು ಅವರನ್ನು ಕುರಿತು:—“ನೀವು ಯಾರು?” “ನಾವು ಗುಪ್ತಚರರು.”

“ಇಲ್ಲಿಗೇಕೆ ಬಂದಿರಿ?”

“ಕೆಲವು ಮಹತ್ವದ ಸಂಗತಿಗಳನ್ನು ಜಯಚಂದ್ರ ಮಹಾರಾಜರಿಗೆ ತಿಳಿಸ ಬೇಕಾಗಿರುವದರಿಂದ ಬಂದೆವು.”

ಆಗಂತುಕರು ಹೀಗೆ ನುಡಿದ ಕೂಡಲೆ ಕಾವಲುಗಾರನು ಒಳಗೆ ಹೋಗಿ ಈ ಸಂಗತಿಯನ್ನು ಜಯಚಂದ್ರನಿಗೆ ತಿಳಿಸಿದನು. ಆಗ ಜಯಚಂದ್ರನು ಮಂಚದ ಮೇಲೆ ಒರಗಿದ್ದನು. ಅವನಿಗಿನ್ನೂ ನಿದ್ದೆ ಹತ್ತಿರಲಿಲ್ಲ. ಕಾವಲುಗಾರನ ಮಾತು ಕೇಳಿ, ಅವನು ಆ ತರುಣರನ್ನು ಒಳಗೆ ಕಳಿಸುವದಕ್ಕಾಗಿ ಆಜ್ಞೆಯನ್ನಿತ್ತನು. ಆಗಲ ವನು ಹೊರಗೆ ಬಂದು ಅಶ್ವಾರೋಹಿಗಳಾದ ಆ ತರುಣರಿಗೆ ಒಳಗೆ ಹೋಗಹೇಳಿದನು.

ಕೂಡಲೆ ಅವರು ಕುದುರೆಗಳಿಂದಿಳಿದು, ಅವುಗಳನ್ನು ಕಟ್ಟಿ ಹಾಕಿ, ಡೇರೆಯನ್ನು ಹೊಕ್ಕರು.

ಜಯಚಂದ್ರನು ಆಗಂತುಕ ತರುಣರ ಮಾರ್ಗಪ್ರತೀಕ್ಷೆ ಮಾಡುತ್ತ ಕುಳಿತಿದ್ದನು. ಅವರು ಒಳಗೆ ಬಂದ ಕೂಡಲೆ ಅವನು ಆ ಅಪರಿಚಿತರನ್ನು ಕುರಿತು-

"ನೀವು ಯಾರು?" ಎಂದು ಕೇಳಿದನು.

ಆಗ ಒಬ್ಬ ತರುಣನು ಜಯಚಂದ್ರನಿಗೆ ನಮಸ್ಕರಿಸಿ, ಅಲ್ಲಿಯೇ ನಿಂತನು; ಮತ್ತೊಬ್ಬನು ಮುಂದಕ್ಕೆ ಹೋಗಿ ಅವನ ಪಾದಗಳ ಮೇಲೆ ಮಸ್ತಕವಿರಿಸಿ ಗದ್ಗದ ಕಂಠದಿಂದ:--"ತಾತಾ! ನನ್ನ ಅಪರಾಧಗಳನ್ನು ಕ್ಷಮಿಸಿರಿ!"

"ಯಾರು; ಸಂಯುಕ್ತೆಯೇನು?" ಜಯಚಂದ್ರನು ವಿಸ್ಮಯದಿಂದ ಕೇಳಿದನು.

"ಹೌದು; ತಾತಾ!" ಪಿತನ ದೃಷ್ಟಿಯಿಂದ ತಾನು ಅಪರಾಧಿಯಿರುವೆನೆಂದು ಕಂಪಿಸುತ್ತಿದ್ದ ಸಂಯುಕ್ತೆಯು:—"ಕೃತಾಪರಾಧವನ್ನು ದೊಡ್ಡ ಮನಸ್ಸಿನಿಂದ ಕ್ಷಮಿಸಿರಿ."

"ಚಾಂಡಾಲಿನೀ! ನೀನು ಸೌಭಾಗ್ಯಹೀನಳಾದ ಮೇಲೆ ನಿನ್ನ ಅಮಂಗಲ ಮುಖವನ್ನು ಸಂಭ್ರಮದಿಂದ ನೋಡಬೇಕೆಂದು ಆತುರಗೊಂಡಿದ್ದೆನು; ಆದರೆ ಇಷ್ಟರಲ್ಲಿಯೇ ನೀನು ಇಲ್ಲಿಗೆ ಬಂದೆಯಾ?"

ವಾಚಕಮಹಾಶಯರೇ, ಆ ಆಗಂತುಕರಲ್ಲಿ ಒಂದು ವ್ಯಕ್ತಿಯು ಸಂಯುಕ್ತೆಯು; ಮತ್ತೊಂದು ವ್ಯಕ್ತಿಯೇ ಪೃಥ್ವೀರಾಜನು. ಸಂಯುಕ್ತೆಯು ಪುರುಷವೇಷದಿಂದ ತಂದೆಯ ಪಾಳ್ಯದಲ್ಲಿ ಬಂದಿದ್ದಳು; ಪೃಥ್ವೀರಾಜನಾದರೂ ತನ್ನ ರಾಜವಸ್ತ್ರಾಲಂಕಾರಗಳನ್ನು ಬಿಟ್ಟು, ಬೇರೆ ವೇಷದಿಂದ ಬಂದಿದ್ದನು. ಸಂಯುಕ್ತೆಗೆ ಜಯಚಂದ್ರನು ಕಠೋರ ವಚನಗಳನ್ನಾಡಿದ ಕೂಡಲೆ ಪೃಥ್ವೀರಾಜನ ಅಭಿಮಾನಿಯಾದ ಹೃದಯಕ್ಕೆ ಬರೆಕೊಟ್ಟಂತಾಯಿತು. ಆದರೂ ಮುಂದಿನ ಕರ್ತವ್ಯದ ಕಡೆಗೆ ಲಕ್ಷ್ಯಗೊಟ್ಟು ಅವನು ಆ ಕಟುವಚನಗಳನ್ನು ಸಹಿಸಿದನು.

"ತಂದೆಯವರೇ, ನಾನು ನಿಮ್ಮ ಪುತ್ರಿಯಲ್ಲವೆ? ಹೀಗಿದ್ದು ಈ ಬಗೆಯ ದೀರ್ಘದ್ವೇಷ ತಳೆಯುವದುಚಿತವೆ?"

"ನೀನು ನನ್ನ ಮಗಳಲ್ಲ; ವೈರಿಯಿರುವೆ! ನನ್ನ ವೈರಿಯನ್ನು ನೀನು ಎಂದು ವರಿಸಿದೆಯೋ ಅಂದೇ ನೀನು ನನ್ನ ವೈರಿಯಾದೆ! ನಡೆ ಇಲ್ಲಿಂದ! ಅರ್ಧಕ್ಷಣವಾದರೂ ಇಲ್ಲಿ ನಿಲ್ಲಬೇಡ! ನಿನ್ನ ಮುಖವನ್ನು ನಾನು ನೋಡಲಾರೆ!"

"ನನ್ನ ಮೇಲೆ ಇಷ್ಟೇಕೆ ಕ್ರೋಧಗೊಳ್ಳುವಿರಿ? ನಿಮಲ್ಲಿ ಕ್ಷಮಾಯಾಚನೆಗಾಗಿ ಬಂದಿರುವ ಈ ದಿಲ್ಲಿಯ ಸಾರ್ವಭೌಮನಲ್ಲಿ ದಯವಿಟ್ಟು ಶಾಂತರಾಗಿರಿ." ಎಂದು ಪೃಥ್ವೀರಾಜನು ಕರಜೋಡಿಸಿ ಪ್ರಾರ್ಥಿಸಿದನು.

"ಏನು? ಇವನು ನಿನ್ನ ಪತಿಯೇ? ನನ್ನ ಅಸ್ಥಿವೈರಿಯಾದ ಪೃಥ್ವಿಯೇ?" ಎಂದು ಜಯಚಂದ್ರನು ಸಂಯುಕ್ತೆಯನ್ನು ಕೇಳಲು, ಪೃಥ್ವೀರಾಜನು:—

"ಹೌದು; ಮಾವನವರೇ, ನಾನೇ ಪೃಥ್ವೀರಾಜ ಚಹ್ವಾಣನು. ನಾನು ನಿಮ್ಮ ಹೇಳಿಕೆಯಂತೆ ನಡೆಯುವದಕ್ಕೊಪ್ಪುವೆನು. ಯುದ್ಧಭೂಮಿಯಲ್ಲಿ ಸ್ವಜನರ ಮೇಲೆ ಶಸ್ತ್ರವನ್ನೆತ್ತಬಾರದೆಂದು ನಾನು ಪ್ರಾರ್ಥಿಸುವೆನು. ನಾನೂ ನೀವೂ ಕೂಡಿಯೇ ಕೃತಘ್ನನಾದ ಶಹಾಬುದ್ದೀನನನ್ನು ಪರಾಭವಗೊಳಿಸೋಣ."

ಪೃಥ್ವೀರಾಜನು ವಿನಯದಿಂದ ಹೀಗೆ ಮಾತನಾಡಿದ ಕೂಡಲೆ ಜಯಚಂದ್ರನ ಸಂತಾಪವು ದ್ವಿಗುಣಿತವಾಯಿತು. ಆಗ ಅವನು ತ್ವೇಷದಿಂದ:—

"ಪೃಥ್ವೀ! ನೀನು ನನ್ನ ಹೃದಯಕ್ಕೆ ಬಲವಾದ ಗಾಯಮಾಡಿ ಈಗ ಕ್ಷಮೆ ಬೇಡುವದಕ್ಕೆ ಬಂದೆಯಲ್ಲವೆ? ಯುದ್ಧದಲ್ಲಿ ನಿನ್ನನ್ನು ಕೊಂದ ಹೊರತು ನನ್ನ ಮನಸ್ಸು ಶಾಂತವಾಗುವಂತಿಲ್ಲ!"

"ಮಹಾರಾಜರೇ, ನೀವು ನನ್ನನ್ನು ಅವಶ್ಯವಾಗಿ ಕೊಲ್ಲಿರಿ; ಅಂತಃಕಲಹದಿಂದ ಸ್ವಜನರ ನಾಶವಾಗಿ ಹಿಂದುಗಳ ಮೇಲೆ ಪರಕೀಯರ ಅಧಿಕಾರ ನೆಲೆಗೊಳ್ಳಬಾರದೆಂದು ನನ್ನ ಉತ್ಕಟೇಚ್ಛೆಯಿರುವದು. ನೀವು ಹೇಳಿದಂತೆ ನಡೆಯುವದಕ್ಕೆ ನಾನು ಸಿದ್ಧನಿರಲಾಗಿ ಇಲ್ಲದ ಹವ್ಯಾಸವನ್ನೇಕೆ ಮಾಡುವಿರಿ? ನನ್ನ ಎಲ್ಲ ರಾಜ್ಯವನ್ನು ನಿಮ್ಮ ಸ್ವಾಧೀನ ಮಾಡಿ, ಉಟ್ಟ ಅರಿವೆಯ ಮೇಲೆ ವನವಾಸಕ್ಕೆ ಹೊರಡಲು ನನ್ನ ಸಿದ್ಧತೆಯಿರುವದು. ನಿಮ್ಮ ಸೇವಾವೃತ್ತಿಯನ್ನು ಕೈಕೊಳ್ಳುವದಕ್ಕೂ ನಾನು ಒಪ್ಪುವೆನು. ಈ ಮಾತು ನಿಮಗೆ ಬೇಡಾಗಿದ್ದರೆ ನನ್ನನ್ನು ಆಮರಣವಾಗಿ ಕಾರಾಗೃಹದಲ್ಲಿರಿಸಿರಿ; ಹೀಗೆ ಮಾಡುವದರಿಂದಲೂ ನಿಮ್ಮ ಮನಸ್ಸು ಶಾಂತವಾಗದಿದ್ದರೆ ನಿಮ್ಮ ಕರದೊಳಗಿನ ಖಡ್ಗದಿಂದ ನನ್ನ ಶಿರಚ್ಛೇದ ಮಾಡಿರಿ! ನಾನು ನಿಮ್ಮ ಕಠೋರ ದಂಡನೆಯನ್ನು ಆಶೀರ್ವಾದವೆಂದು ತಿಳಿದು ಸಂತುಷ್ಟನಾಗುವೆನು. ಮಹಾರಾಜರೇ, ನೀವು ಇಂದಿನಿಂದ ದಿಲ್ಲಿಯ ಸಮ್ರಾಟರೆಂದು ತಿಳಿದುಕೊಳ್ಳಿರಿ. ನಾನು ಮರಣಕ್ಕೆ ಹೆದರಿಯಾಗಲಿ, ಯುದ್ಧದ ಭಯದಿಂದಾಗಲಿ ಹೀಗೆ ಕ್ಷಮಾಯಾಚನೆಗೆ ಬಂದಿಲ್ಲ. ಸ್ವಗೃಹದ ಹಾಗು ಸ್ವಜನರ ನಾಶವಾಗಬಾರದೆಂದು ನಾನು ಇಚ್ಛಿಸುವೆನು. ಜಯಚಂದ್ರ ಮಹಾರಾಜರೇ, ಅಲ್ಪ ಕಾರಣಕ್ಕಾಗಿ ದೇಶವನ್ನು ಸ್ಥಿರವಾಗಿ ನಾಶಮಾಡುವದಕ್ಕೆ ಪ್ರವೃತ್ತರಾಗುವಿರೆಂದು ನಾನು ಕನಸು-ಮನಸಿನಲ್ಲೂ ಭಾವಿಸಿದ್ದಿಲ್ಲ. ಇನ್ನು ನೀವು ಶಾಂತರಾಗಿರಿ. ಮನಸ್ಸಿನೊಳಗಿನ ಕುನಸು ಮರೆಯಿರಿ. ಶಹಾಬುದ್ದೀನನು ನಮ್ಮ ನಾಶಕ್ಕಾಗಿ ಧಾವಿಸಿ ಬಂದಿರುವನು. ಇಂದು ನನ್ನ ನಾಶ ಮಾಡಿದರೆ ನಾಳೆ ನಿಮ್ಮನ್ನೂ ನಿಮ್ಮ ರಾಜ್ಯವನ್ನೂ ವಿಧ್ವಂಸ ಮಾಡುವದಕ್ಕೆ ಅವನು ಹಿಂಜರಿಯುವದಿಲ್ಲ. ನನಗೀಗ ಅಭಯಕೊಡಿರಿ."

“ಪೃಥ್ವೀರಾಜ, ನಾನೀಗ ಯಾವ ಬಗೆಯಿಂದಲೂ ಅಭಯ ಕೊಡಲಾರೆನು. ರಣಭೂಮಿಯಲ್ಲಿಯೇ ನಿನ್ನ ಮಾತಿಗೆ ಉತ್ತರವೀಯುವೆನು.”

“ಇದೇನು ಮಾತನಾಡುವಿರಿ? ಅಂತಃಕಲಹದಿಂದ ಸ್ವಜನರ ನಾಶವಾಗಬಾರದೆಂದು ಈ ಬಗೆಯಾಗಿ ವಿಜ್ಞಾಪನೆ ಮಾಡಿಕೊಂಡರೆ, ಮತ್ತೆ ಯುದ್ಧದ ಪ್ರಸಂಗವನ್ನೇ ಇಚ್ಛಿಸುವಿರಾ? ನಾನು ಅಪಜಯಗೊಳ್ಳುವೆನೆಂದಾಗಲಿ ಯುದ್ಧಭೂಮಿಯಲ್ಲಿ ಮರಣ ಹೊಂದುವೆನೆಂದಾಗಲಿ ಬೆದರಿ ಇಲ್ಲಿಗೆ ಬಂದಿಲ್ಲವೆಂದು ಮೊದಲೇ ಹೇಳಿಲ್ಲವೆ? ಜಯಾಪಜಯಗಳು ದೈವಾಧೀನವಾದವುಗಳೆಂದು ನನ್ನ ವಿಶ್ವಾಸವಿರುವದು. ನಾನು ಜಯಶಾಲಿಯಾದರೆ ಒಳಿತು; ಈಶ್ವರೀ ಕ್ಷೋಭೆಯಿಂದ ಹಾಗಾಗದಿದ್ದರೆ ಹಿಂದುಗಳ ಮೇಲೆ ಭಯಂಕರವಾದ ಗಂಡಾಂತರ ಬರುವದು ನಿಶ್ಚಿತ. ಇಂದಿನ ವರೆಗೆ ಸ್ವಾತಂತ್ರ್ಯಸೌಖ್ಯವನ್ನನುಭವಿಸಿದ ಸ್ವಜನರು ನನ್ನ ಅಪಜಯದಿಂದ ಭೀಷಣವಾದ ಪಾರತಂತ್ರ್ಯಪಂಕದಲ್ಲಿ ಸಿಲುಕುವರೆಂಬ ಭವಿಷ್ಯವು ನನಗೀಗ ನಿಚ್ಚಳವಾಗಿ ಕಾಣತೊಡಗಿರುವದು. ನನ್ನನ್ನು ನಾಶಮಾಡಿದ ಶಹಾಬುದ್ದೀನನಿಗೆ ನಿಮ್ಮನ್ನು ನಾಶಮಾಡುವ ಕೆಲಸವು ದೊಡ್ಡದಾಗಲಿಕ್ಕಿಲ್ಲ. ಬಹಳ ಹೇಳುವದೇನು? ನಿಮ್ಮಲ್ಲಿ ಸ್ವಜನಾನುರಾಗವಿದ್ದರೆ, ಸ್ವದೇಶಪ್ರೀತಿಯು ಜಾಗ್ರತವಿದ್ದರೆ, ರಾಷ್ಟ್ರದಲ್ಲಿ ಸ್ವಾತಂತ್ರ್ಯಸೂರ್ಯನ ಕಿರಣಗಳು ಅಬಾಧಿತವಾಗಿರಬೇಕೆಂಬ ಇಚ್ಛೆಯಿದ್ದರೆ ನಿಮ್ಮ ಖಡ್ಗವನ್ನು ಒರೆಗಾಣಿಸಿರಿ; ಹಾಗು ನನ್ನೊಡನೆ ಸ್ನೇಹದಿಂದ ನಡೆಯುವದಕ್ಕೆ ಸಿದ್ಧರಾಗಿರಿ!”

“ಪೃಥ್ವೀರಾಜ, ನಿನ್ನ ಮನೋಗತವನ್ನು ನಾನು ಅರಿತಿರುವೆನು. ಈಗ ನಮ್ರನಾಗಿದ್ದ ನೀನು ನಾಳೆ ನನ್ನ ಮೇಲೆ ಬೀಳಲಿಕ್ಕಿಲ್ಲವೆಂದು ಹೇಗೆ ತಿಳಿಯಬೇಕು?” ಎಂದು ಜಯಚಂದ್ರನು ನುಡಿದ ಕೂಡಲೆ, ಸಂಯುಕ್ತೆಯು :—

“ತಂದೆಯೇ, ಇವರ ಮೇಲೆ ನಿನ್ನ ನಂಬಿಗೆಯಿಲ್ಲವಲ್ಲವೇ? ಹಾಗಿದ್ದರೆ ಮೊದಲು ನನ್ನನ್ನು ಸಂಹರಿಸಿರಿ. ಅನಂತರ ಅದೇ ಖಡ್ಗವನ್ನು ಇವರ ಮೇಲೆ ಪ್ರಯೋಗಿಸಿ ನಿಮ್ಮ ಮಾರ್ಗವನ್ನು ನಿರುಪಾಧಿಕ ಮಾಡಿಕೊಳ್ಳಿರಿ.”

“ನನ್ನ ವಿಚಾರದಲ್ಲಿ ಹೆಚ್ಚು-ಕಡಿಮೆಯಾಗುವಂತಿಲ್ಲ. ಯುದ್ಧಭೂಮಿಯಲ್ಲಿಯೇ ನಾನು ಮಾಡಬೇಕಾದ ಕಾರ್ಯ ಮಾಡುವೆನು. ನೀವು ಈರ್ವರೂ ಇನ್ನು ಇಲ್ಲಿ ಅರೆಕ್ಷಣ ಸಹ ನಿಲ್ಲದೆ ಹೊರಟು ಹೋಗಿರಿ.”

ಜಯಚಂದ್ರನ ನಿಷ್ಠುರವಾಣಿಯನ್ನು ಕೇಳಿ ಪೃಥ್ವೀರಾಜನಿಗೂ ಸಂಯುಕ್ತೆಗೂ ಪರಮಾವಧಿ ವ್ಯಸನವಾಯಿತು. ಅವರು ನಿರುಪಾಯರಾಗಿ, ದೀರ್ಘವಾದ ನಿಟ್ಟುಸಿರು ಬಿಟ್ಟು, ಅಲ್ಲಿಂದ ಹೊರಟುಹೋದರು.

ಜಯಚಂದ್ರಾ! ಸಮ್ರಾಟನಾದ ಪೃಥ್ವೀರಾಜನು ನಿನ್ನ ಹೇಳಿಕೆಯಂತೆ ನಿನ್ನ ಮೆ ಯುವದಕ್ಕೆ ಸಿದ್ಧನಾಗಿ ಬಂದಿದ್ದರೂ ನಿನ್ನ ಪಾಷಾಣ ಹೃದಯವು ದ್ರವಿಸಲಿಲ್ಲವೆ? ಹೊರಗಿನ ವೈರಿಯನ್ನು ಒಳಗೆ ತೆಗೆದುಕೊಂಡು ಭಾರತದ ಸ್ವಾತಂತ್ರ್ಯಸೂರ್ಯನನ್ನು ಸ್ಥಿರವಾಗಿ ಅಸ್ತಗೊಳಿಸಬೇಕೆಂಬ ದುರ್ಬುದ್ಧಿಯು ನಿನ್ನಲ್ಲಿ ಏಕೆ ಹುಟ್ಟಿತು? ಧಿಃಕಾರವು! ನಿನ್ನ ಪೈಶಾಚ್ಯ ವೃತ್ತಿಗೆ ಶತಶಃ ಧಿಃಕಾರವು!!

———

ಪೃಥ್ವೀರಾಜನ ಪ್ರಾರ್ಥನೆಯು ಅರಣ್ಯರೋದನವಾದಂತಾಗಿ ಕಡೆಗೆ ಯುದ್ಧವು ಪ್ರಾರಂಭವಾಯಿತು. ಒಂದು ಕಡೆಯಲ್ಲಿ ಶಹಾಬುದ್ದೀನ ಘೋರಿ, ಜಯಚಂದ್ರ, ಭೀಮದೇವ ಮೊದಲಾದವರ ಸೈನ್ಯಗಳೂ, ಮತ್ತೊಂದು ಕಡೆಯಲ್ಲಿ ಪೃಥ್ವೀರಾಜ, ಸಮರ ಸೂರ್ಯಾಸ್ತ! ಸಿಂಹ, ಜೈತಸಿಂಹ ಮೊದಲಾದವರ ಸೈನ್ಯಗಳೂ ಇದ್ದವು. ಎರಡೂ ಪಕ್ಷಗಳ ನಡುವೆ ನಿಕರದ ಸಂಗ್ರಾಮವು ಪ್ರಾರಂಭವಾಯಿತು. ಪೃಥ್ವೀರಾಜನೂ ಚಾಮುಂಡರಾಯ, ಹಮೀರಹಾಡಾ ಮೊದಲಾದ ಸೇನಾಪತಿಗಳೂ ಮೈಮರೆದು ಕಾದತೊಡಗಿದ್ದರು. ಕ್ಷತ್ರಿಯ ಸೈನಿಕರ ಹೊಡೆತದಿಂದ ಯವನರು ನುಗ್ಗುನುಗ್ಗಾಗತೊಡಗಿದ್ದರು. ಎರಡು ಬಣಗಳ ಕಡೆಯ ಅನೇಕ ಜನರು ಭೂಮಿಗೆ ಬಿದ್ದರು. ನೆತ್ತರವು ಕಾಲುವೆಯಾಗಿ ಹರಿಯತೊಡಗಿತ್ತು. ಮಧ್ಯಾಹ್ನದವರೆಗೆ ಯುದ್ಧವು ನಡೆದರೂ ಯಾವ ಪಕ್ಷವೂ ಹಿಂಜರಿಯಲಿಲ್ಲ. ವಿಜಯಶ್ರೀಯು ಇಂಥವರಿಗೇ ಮಾಲೆ ಹಾಕುವಳೆಂಬದರ ನಂಬಿಗೆಯಾಗಲೊಲ್ಲದು. ಪೃಥ್ವೀರಾಜನು ಒಳ್ಳೆಯ ಪರಾಕ್ರಮದಿಂದ ಕಾದತೊಡಗಿ ಜಯಚಂದ್ರನನ್ನು ಸಮೀಪಿಸಿದ್ದನು ದೇಶದ್ರೋಹಿಯಾದ ಅವನ ಪಾರಿಪತ್ಯವೆಸಗಬೇಕಾದ್ದರಿಂದ, ಅವನ ಕಡೆಗೆ ಪೃಥ್ವೀರಾಜನು ವಾಯುವೇಗದಿಂದ ಸಾಗಿದ್ದನು. ಸಮರ ಸಿಂಹಾದಿ ವೀರರು ಶಹಾಬುದ್ದೀನನ ಸೈನ್ಯವನ್ನು ಕಾಲನಂತೆ ಸಂಹರಿಸತೊಡಗಿದ್ದರು. ಆಗಿನ ಲಕ್ಷಣವನ್ನು ನೋಡಿ ತಮ್ಮ ಪಕ್ಷಕ್ಕೇ ವಿಜಯದೊರೆಯುವದೆಂದು ಹಿಂದು ಸೈನಿಕರು ಸಂಭ್ರಮಗೊಂಡಿದ್ದರು. ಅಷ್ಟರಲ್ಲಿ ಘೋರಿಯ ಸೈನ್ಯವು ಹಿಂದಿರುಗಿತು; ಅದು ಒಳ್ಳೇ ಭರದಿಂದ ಶತ್ರುಗಳಿಗೆ ಪರಾಙ್ಮುಖವಾಗಿ ಓಡತೊಡಗಿತು. ಕೂಡಲೆ ಹಿಂದು ಸೈನ್ಯವು ಅದನ್ನು ಬೆನ್ನಟ್ಟಿತು. ಯವನ ಸೈನ್ಯವು ಓಡತೊಡಗಿದ್ದನ್ನು ನೋಡಿ ಜಯಚಂದ್ರನು ಭಯಭೀತನಾದನು.

ಘೋರಿಯು ತನ್ನ ಸೈನ್ಯವನ್ನು ಮತ್ತೆ ತಿರುಗಿಸಿದನು! ಅವನ ಸೈನ್ಯವು ಏರಿಬರುವ ಹಿಂದುಗಳ ಮೇಲೆ ಬಿದ್ದು ಅವರನ್ನು ಸಂಹರಿಸತೊಡಗಿತು ಮೊದಲು ಬೆದರಿದಂತೆ ನಟಿಸಿ, ಹಿಂದಿನಿಂದ ಬೆನ್ನಟ್ಟಿ ಬರುವ ಸೈನಿಕರ ಮೇಲೆ ಹಠಾತ್ತಾಗಿ ಬೀಳಬೇಕೆಂದು ಘೋರಿಯು ಯೋಚಿಸಿದ್ದನು. ಅವನ ಹಂಚಿಕೆಯು ಪೂರ್ಣವಾಗಿ

ಫಲಿಸಿತು. ಯವನರ ಅಬ್ಬರಕ್ಕೆ ಹಿಂದೂ ಸೈನ್ಯವು ಚದರಿತು. ಪೃಥ್ವೀರಾಜನು ತನ್ನ ಸ್ವಾಮಿನಿಷ್ಠ ಸೈನಿಕರಿಗೆ ಪ್ರೋತ್ಸಾಹನೆ ಕೊಡುತ್ತ ಕಾದತೊಡಗಿದನು. ಸಂಗ್ರಾಮದಲ್ಲಿ ಚಾಮುಂಡರಾಯ, ಹಮೀರಹಾಡಾ, ಜೈತಸಿಂಹ, ಸಮರಸಿಂಹ ಮೊದಲಾದ ವೀರರು ಭೂಮಿಗೆ ಬಿದ್ದರು. ಆದರೂ ಚಹ್ವಾಣ ವೀರನಾದ ಪೃಥ್ವೀರಾಜನು ಧೃತಿಗುಂದಲಿಲ್ಲ. ಸಂಧ್ಯಾಸಮಯವಾಗುತ್ತ ಬಂದಿದ್ದರೂ ಇಂಥವರ ಪಕ್ಷಕ್ಕೇ ಜಯ ದೊರೆಯುವದೆಂಬ ನಿಶ್ಚಯಸ್ವರೂಪವು ಕಾಣಲಿಲ್ಲ. ಅಷ್ಟರಲ್ಲಿ ಒಬ್ಬ ಯವನನು ಪೃಥ್ವೀರಾಜನ ಮೇಲೆ ಖಡ್ಗಪ್ರಯೋಗ ಮಾಡಿದನು! ಕೂಡಲೆ ಆ ಶಸ್ತ್ರಾಘಾತದಿಂದ ದಿಲ್ಲಿಯ ಸಮ್ರಾಟನು ಭೂಮಿಗೆ ಬಿದ್ದು ಗತಾಸುವಾದನು!!

ಆಯಿತು! ಆರ್ಯ ಸೂರ್ಯನ ಅಸ್ತವಾಯಿತು! ಜಯಚಂದ್ರನ ರುಧಿರ ತೃಷಿತ ಆತ್ಮವು ಶಾಂತವಾಯಿತು!

ಹಿಂದೂ ಸೈನಿಕರು ಪೃಥ್ವೀರಾಜನ ಮೃತದೇಹವನ್ನು ಶಿಬಿರಕ್ಕೆ ಒಯ್ದರು. ಪತಿಯ ಪ್ರಾಣಜ್ಯೋತಿವಿಹೀನವಾದ ಕಾಯವನ್ನು ನೋಡಿ ಸಂಯುಕ್ತೆಯ ಕೋಮಲ ಹೃದಯಕ್ಕೆ ವಜ್ರಾಘಾತವಾದಂತಾಯಿತು. ಅವಳಿಗಾದ ದುಃಖವನ್ನು ವರ್ಣಿಸುವದು ಅಸದಳವೇ ಸರಿ. ಆ ಸಾಧ್ವಿಗೆ ರೋದಿಸುತ್ತ ಕುಳಿತುಕೊಳ್ಳುವದಕ್ಕೆ ಸಹ ವಿಲಂಬವಿದ್ದಿಲ್ಲ. ಅವಳು ಪತಿದೇಹವನ್ನು ಶಿಬಿರದಲ್ಲಿಯೇ ಬಿಟ್ಟು, ಚದರಿದ ತನ್ನ ಸೈನಿಕರನ್ನು ಒಟ್ಟುಮಾಡಿ ಸಮರಕ್ಕೆ ಅಣಿಯಾದಳು.

ಹಿಂದೂ ಸೈನಿಕರು ಜೀವದ ವ್ಯಾಮೋಹವನ್ನು ಪೂರ್ಣವಾಗಿ ಬಿಟ್ಟರು. ವೀರಪತ್ನಿಯಾದ ಸಂಯುಕ್ತೆಯ ಸ್ಫೂರ್ತಿದಾಯಕ ಭಾಷಣದಿಂದ ಅವರಲ್ಲಿ ನವ ಚೈತನ್ಯವುಂಟಾಗಿ ತುಮುಲವಾದ ಕಾಳಗವನ್ನು ನಡೆಯಿಸಿದರು. ಸಂಯುಕ್ತೆಯು ರಣಚಂಡಿಯಂತೆ ಶತ್ರುಸಂಹಾರ ನಡೆಸಿದ್ದಳು!

ಪೃಥ್ವೀರಾಜನ ಮೃತಿಯಿಂದ ದೇಹಭಾವವನ್ನು ಬಿಟ್ಟು ಕಾದುವ ಸೈನ್ಯದೊಡನೆ ಯುದ್ಧ ಮಾಡುವದು ಇಷ್ಟವಲ್ಲೆಂದು ಶಹಾಬುದ್ದೀನನಿಗೆ ತೋಚಿದ್ದರಿಂದ, ಅವನು ತನ್ನ ಸೈನ್ಯವನ್ನು ಹಿಂದಕ್ಕೆ ತೆಗೆದುಕೊಂಡನು. ಪಲಾಯನ ಮಾಡತೊಡಗಿದ ಯವನರ ಬೆನ್ನು ಹತ್ತಲಾರದೆ, ಹಿಂದೂ ಸೈನಿಕರು ತಮ್ಮ ಶಿಬಿರಕ್ಕೆ ಬಂದರು. ಆ ಸ್ವಾಮಿನಿಷ್ಠರು ತಮ್ಮ ಒಡೆಯನ ಮರಣದಿಂದ ಉದಾಸರಾಗಿದ್ದರಿಂದ ಮುಂದುವರಿಯದಿದ್ದದ್ದರಲ್ಲಿ ಸೋಜಿಗವೇನು?

ಹೀಗೆ ಹಿಂದು ಸೈನ್ಯಕ್ಕೆ ವಿಜಯ ದೊರೆಯಿತು; ಆದರೆ ಪ್ರಯೋಜನವೇನು?

ದಾರುಣವಾದ ಶೋಕದಿಂದ ಸಂಯುಕ್ತೆಯ ಹೃದಯವು ಕಮರಿಹೋಗಿತ್ತು. ನೇತ್ರಗಳೊಳಗಿನ ಅಶ್ರುಗಳು ಒಣಗಿಹೋಗಿದ್ದವು. ಸಾಧ್ವಿಯಾದ ಸಂಯುಕ್ತೆ! ನಿನ್ನ ಸಂಗ್ರಾಮ ನೈಪುಣ್ಯದ ಸಾರ್ಥಕತೆಯಾಗದೆ ಹೋಯಿತಲ್ಲ! ನೀನು ಯಾವ

ಮುಖದಿಂದ ಮನೆಗೆ ಹೋಗುವೆ? ವಿಜಯಾನಂದದಿಂದ ರಾಜಧಾನಿಯಲ್ಲಿ ಉತ್ಸವ ಕಾರ್ಯಗಳನ್ನು ಹೇಗೆ ಜರುಗಿಸುವೆ? ವೀರ ಪತ್ನಿಯಾದ ನೀನು ಹಿಂದುಗಳ ಸ್ವಾತಂತ್ರ್ಯ ರಕ್ಷಣೆಗಾಗಿ ಹೆಣಗಿ ಜಯವನ್ನು ಸಂಪಾದಿಸಿದೆ! ಆದರೆ ಪ್ರಯೋಜನವೇನು?

ಸ್ಥಾನೇಶ್ವರದ ರಣಭೂಮಿಯಲ್ಲಿ ಕಾಮಾನದಿಯ ತಟಾಕದ ಹತ್ತರ ಭಯಂಕರವಾದ ಚಿತೆಯು ನಿರ್ಮಿಸಲ್ಪಟ್ಟಿತ್ತು. ಧಾರಾತೀರ್ಥದಲ್ಲಿ ಶಯನಮಾಡಿ ವೀರ ಸ್ವರ್ಗವನ್ನೈದಿದ ವೀರಪುರುಷರ ವೀರಪತ್ನಿಯರು ಸಹಗಮನ ಮಾಡುವದಕ್ಕೆ ಸುಸಜ್ಜಿತರಾಗಿದ್ದರು. ಅವರು ದಾನ-ಧರ್ಮಗಳನ್ನರ್ಪಿಸಿ ಚಿತೆಗೆ ಪ್ರದಕ್ಷಿಣೆ ಮಾಡಿದರು. ಅವರೆಲ್ಲರೂ ಪತಿಸನ್ನಿಧಿಯನ್ನು ಸೇರುವೆವೆಂಬ ಸಂಭ್ರಮದಿಂದ ನಗೆ ಮೊಗವುಳ್ಳವರಾಗಿದ್ದರು. ಪ್ರದಕ್ಷಿಣೆಯು ಮುಗಿದ ಕೂಡಲೆ ಅಗ್ನಿಯಲ್ಲಿ ತಮ್ಮ ಜಡ ದೇಹವನ್ನು ಚೆಲ್ಲಿದರು. ಸತೀ ಶಿರೋಮಣಿಗಳಾದ ಸಂಯುಕ್ತೆ, ಇಚ್ಛಿನೀಕುಮಾರಿ, ಚಿತ್ರರೇಖೆ ಮೊದಲಾದ ಸಾಧ್ವಿಯರ ದೇಹಗಳು ಸುಟ್ಟು ಭಸ್ಮವಾಗಿ ಹೋದವು! ಪೃಥ್ವೀರಾಜನ ಅವಶಿಷ್ಟ ಸೈನ್ಯವು ಹಿಂದುಗಳ ಸ್ವಾತಂತ್ರ್ಯದ ಕಡೆಯ ಭಸ್ಮವನ್ನು ಮೈಗೆ ಲೇಪಿಸಿಕೊಂಡು ಕಣ್ಣೀರುದುರಿಸುತ್ತ ರಣಭೂಮಿಯನ್ನು ಬಿಟ್ಟು ತೆರಳಿತು.

ಸೂರ್ಯಾಸ್ತವಾಯಿತು! ಸ್ಥಾನೇಶ್ವರದ ರಣಭೂಮಿಯಲ್ಲಿ ಅಸ್ತಂಗತನಾದ ಸೂರ್ಯನು ಇದುವರೆಗೂ ಅಸ್ತಂಗತನಾಗಿಯೇ ಇರುವನು. ಅವನು ತಿರುಗಿ ಎಂದಿಗೆ ಉದಯಿಸುವನೆಂಬದನ್ನು ಕಂಡುಹಿಡಿದವರಾರಿರುವರು?

+ + × + +

ಹಿಂದು ದೇಶದ ಸ್ವಾತಂತ್ರ್ಯವು ನಾಶವಾಯಿತು. ಅದು ಪಾರತಂತ್ರ್ಯದ ಮೊದಲನೆಯ ಮೆಟ್ಟಲನ್ನಿಳಿಯಿತು. ಪುರಾತನದಿಂದ ಹಿಂದುಗಳ ಕೈಯಲ್ಲಿದ್ದ ಪ್ರಸಿದ್ಧ ರಾಜಧಾನಿಯಾದ ಇಂದ್ರಪ್ರಸ್ಥವು ಇಂದು ಪರಾಧೀನವಾಯಿತು!

ಹಿಂದುಗಳು ಭಗ್ನಮನೋರಥರಾಗಿ ಹಿಂದಿರುಗಿದ್ದರಿಂದ ಶಹಾಬುದ್ದೀನನಿಗೆ ಕಡು ಸಂಭ್ರಮವಾಯಿತು. ಅವನು ತನ್ನ ಸೈನ್ಯವನ್ನು ತೆಗೆದುಕೊಂಡು ದಿಲ್ಲಿಯ ಕಡೆಗೆ ಸಾಗಿದನು. ಚಿತ್ರರೇಖೆಯೂ, ಅವಳಿಗಿಂತ ಹೆಚ್ಚಿನ ರೂಪವತಿಯರೂ ದೊರೆಯುವರೆಂದು ಅವನು ಹಾರೈಸಿದ್ದನು; ಆದರೆ ಅವನ ಮನೋರಥವು ವ್ಯರ್ಥವಾಯಿತು; ಯಾಕಂದರೆ ಇಷ್ಟು ಹೊತ್ತಿಗೆ ರಾಜಪರಿವಾರದ ಎಲ್ಲ ಸತೀ ಶಿರೋಮಣಿಗಳು ಅಗ್ನಿಕಾಷ್ಠಭಕ್ಷಣೆಮಾಡಿದ್ದರು! ಘೋರಿಯು ಅಜಮೀರ, ದಿಲ್ಲಿಗಳನ್ನು ಕೈವಶ ಮಾಡಿಕೊಂಡನಂತರ ಅಲ್ಲಿ ಮಾಡಿದ ಕೊಲೆಸುಲಿಗೆಗಳನ್ನು ವರ್ಣಿಸಲಳವಲ್ಲ!

o o o o o o

ಪೃಥ್ವಿಯು ಯುದ್ಧದಲ್ಲಿ ಮಡಿದರೆ ಅವನ ರಾಜ್ಯಕ್ಕೆ ತಾನೇ ಒಡೆಯನಾಗುವೆನೆಂದೂ ಹಾಗಾದರೆ ತನಗೆ ಸಾರ್ವಭೌಮಪದವು ದೊರೆತಂತಾಗುವದೆಂದೂ ಜಯ

ಚಂದ್ರನು ಮನೋರಾಜ್ಯ [illegible] ಕಾರ್ಯಸಾಧಕನಾದ [illegible]ರಿಯು ಯ[illegible] ಮುಗಿದ ಮೇಲೆ ಅವನ ಕಡೆಗೆ ಕಣ್ಣೆತ್ತಿ ಸಹ ನೋಡಲಿಲ್ಲ, ಜಿತರಾ[illegible] ಮೇಲೆ ಆತನು ಕುತುಬುದ್ದೀನ ಐಜಾಕನೆಂಬ ತನ್ನ ಸರದಾರನನ್ನು ನಿಯಮಿಸಿದನು.

ಯುದ್ಧದಿಂದ ತನಗೆ ಯಾವ ವಿಧದ ಫಲವೂ ದೊರೆಯಲಿಲ್ಲೆಂದು ಜಯಚಂದ್ರನಿಗೆ ಬಹಳೇ ಪಶ್ಚಾತ್ತಾಪವಾಯಿತು. ಅವನು ಘೋರಿಯನ್ನು ದ್ವೇಷಿಸತೊಡಗಿದನು. ಅವನ ಮೇಲೆ ದಂಡೆತ್ತಿ ಬರುವದಕ್ಕೆ ಘೋರಿಗೆ ಕಾರಣವು ಬೇಕೇಬೇಕಾಗಿತ್ತು. ತನ್ನನ್ನು ದ್ವೇಷಿಸುವದು ಅವನಿಗೆ ತಿಳಿದ ಕೂಡಲೆ ಅವನು ಅಪಾರ ಸೈನ್ಯದೊಡನೆ ಜಯಚಂದ್ರನ ಮೇಲೆ ಸಾಗಿಬಂದನು. ಪರಕೀಯರು ರಾಕ್ಷಸೀ ರಾಜ್ಯತೃಷ್ಣೆಗೊಳಗಾಗಿ ಹೇಗೆ ಕೃತಘ್ನರಾಗುವರೆಂಬದು ಈ ದೃಷ್ಟಾಂತದಿಂದ ಸ್ಪಷ್ಟವಾಗುತ್ತದೆ. ಈಗ ಮಾತ್ರ ಜಯಚಂದ್ರನು ಬಹು ಪರಿಯಾಗಿ ಖೇದಪಟ್ಟನು. ಪೃಥ್ವೀರಾಜನೊಡನೆ ದ್ವೇಷ ಬಳೆಯಿಸಿ ಆರ್ಯಾವರ್ತವನ್ನು ನಿರ್ವೀರ್ಯ ಮಾಡಿದ್ದು ಒಳಿತಾಗಲಿಲ್ಲವೆಂದು ಅವನು ಚಿಂತಿಸತೊಡಗಿದನು. ಈಗ ಚಿಂತಿಸಿದರೆ ಆಗುವದೇನು? ಶಹಾಬುದ್ದೀನನು ದಂಡೆತ್ತಿ ಬಂದ ಕೂಡಲೆ ಅವನು ತನ್ನ ಬಲದೊಂದಿಗೆ ಘೋರಿಗೆ ಎದುರಾದನು. ಚಂದ್ರಾವರದ ಹತ್ತರ ಯುದ್ಧ ನಡೆಯಿತು. ಬಲಾಢ್ಯನಾದ ಘೋರಿಗೆ ಜಯಚಂದ್ರನು ಈಡಾಗಲಿಲ್ಲ. ಅವನು ರಣಭೂಮಿಯಲ್ಲಿ ದೇಹವಿಟ್ಟನು! ಶಹಾಬುದ್ದೀನನು ಅವನ ಕನ್ಯಕುಬ್ಜ ರಾಜ್ಯವನ್ನು ಕೈವಶ ಮಾಡಿಕೊಂಡನು. ಬಹು ಪುರಾತನದ ಕನೋಜ ಪಟ್ಟಣವನ್ನು ಸುಲಿದು, ಹೇರಳ ಹಣವನ್ನು ಅವನು ಸ್ವದೇಶಕ್ಕೊಯ್ದನು. ಹೀಗೆ ಆ ದೇಶದ್ರೋಹಿಗೆ ತಕ್ಕ ಶಾಸನವಾಯಿತೆಂದು ಆನಂದಪಡಬೇಕೋ, ಒಬ್ಬ ಹಿಂದೂ ರಾಜನು ಮೃತನಾಗಿ, ಅವನ ರಾಜ್ಯವು ಪರಾಧೀನವಾಯಿತೆಂದು ದುಃಖಪಡಬೇಕೋ?

ಶಹಾಬುದ್ದೀನ ಘೋರಿಯು ಗುಜರಾಥ, ಗ್ವಾಲ್ಹೇರ, ಬಂಗಾಲ ಮೊದಲಾದ ಪ್ರಾಂತಗಳನ್ನು ಕೈವಶಮಾಡಿಕೊಂಡು ಭಾರತಸಾಮ್ರಾಜ್ಯ ಸಿಂಹಾಸನವನ್ನೇರಿದನು. ಪುರಾತನದಿಂದ ಹಿಂದುಗಳ ರಾಜಧಾನಿಯಾಗಿದ್ದ ದಿಲ್ಲಿಯು ಪರಕೀಯರ ಹಸ್ತಗತವಾಗಿ, ಆ ಆರ್ಯಸಿಂಹಾಸನವು ಪರಕೀಯ ಅರಸನಿಂದ ವಿಭೂಷಿತವಾಯಿತು.

ವಾಚಕರೇ, ಇಲ್ಲಿಗೆ ಹಿಂದುಗಳ ಸ್ವಾತಂತ್ರ್ಯದ **ಸೂರ್ಯಾಸ್ತ**ವಾಯಿತು.

---

ಸಂಪೂರ್ಣಂ.





